'ಅರಳು ಮರಳು' ಅನಂತರ
ಮರಳಿ ಅರಳಿದ ಕವನ ಸಂಕಲನ
ಜ್ಞಾನಪೀಠ ಪ್ರಶಸ್ತಿ ಪಡೆದ ಕೃತಿ

# ನಾಕುತಂತಿ

ಅಂಬಿಕಾತನಯದತ್ತ (ವರಕವಿ ಡಾ. ದ.ರಾ. ಬೇಂದ್ರೆ) ವಿರಚಿತ



ಸಂಪಾದಕ: ಡಾ. ವಾಮನ ಬೇಂದ್ರೆ

ವರಕವಿ ಡಾ. ದ.ರಾ. ಬೇಂದ್ರೆ ಸಂಶೋಧನಾ ಸಂಸ್ಥೆಯ ಕೊಡುಗೆ








# ನಾಕುತಂತಿ

ಜ್ಞಾನಪೀಠ ಪ್ರಶಸ್ತಿ ಪಡೆದ ಕವನ ಸಂಕಲನ






ಅಂಬಿಕಾತನಯದತ್ತರ ಕಾವ್ಯ
(ವರಕವಿ ಡಾ|| ದ. ರಾ. ಬೇಂದ್ರೆ)

# ನಾಕುತಂತಿ

ಜ್ಞಾನಪೀಠ ಪ್ರಶಸ್ತಿ ಪಡೆದ ಕವನ ಸಂಕಲನ

ಸಂಪಾದಕರು :
ಡಾ|| ವಾಮನ ಬೇಂದ್ರೆ,
ಸಹ-ನಿರ್ದೇಶಕರು,
ಬೇಂದ್ರೆ ಸಂಶೋಧನ ಸಂಸ್ಥೆ, ಹುಬ್ಬಳ್ಳಿ.



ಪ್ರಕಾಶಕರು :
ಡಾ|| ಕೆ. ಎಸ್. ಶರ್ಮಾ,
ನಿರ್ದೇಶಕರು, ಬೇಂದ್ರೆ ಸಂಶೋಧನ ಸಂಸ್ಥೆ,
ಶ್ರೀಮಾತಾ ಪ್ರಕಾಶನ,
ಅಂಬಿಕಾತನಯದತ್ತ ವೇದಿಕೆ
''ವಿಶ್ವಶ್ರಮ ಚೇತನ'', ಗೋಕುಲ ರಸ್ತೆ, ಹುಬ್ಬಳ್ಳಿ - ೫೮೦ ೦೩೦.
ಕರ್ನಾಟಕ ರಾಜ್ಯ

ನಾಕುತಂತಿ : (ಜ್ಞಾನಪೀಠ ಪ್ರಶಸ್ತಿ ಪಡೆದ ಕವನ ಸಂಕಲನ)

★

ಕವಿ : 'ಅಂಬಿಕಾತನಯದತ್ತ' (ವರಕವಿ ಡಾ|| ದ. ರಾ. ಬೇಂದ್ರೆ)

★

ಸಂಪಾದಕರು : ಡಾ|| ವಾಮನ ಬೇಂದ್ರೆ,
ಸಹ ನಿರ್ದೇಶಕರು, ಬೇಂದ್ರೆ ಸಂಶೋಧನ ಸಂಸ್ಥೆ, ಹುಬ್ಬಳ್ಳಿ

★

ಪ್ರಕಾಶಕರು :
ಡಾ|| ಕೆ. ಎಸ್. ಶರ್ಮಾ, ನಿರ್ದೇಶಕರು, ಬೇಂದ್ರೆ ಸಂಶೋಧನ ಸಂಸ್ಥೆ, ಹುಬ್ಬಳ್ಳಿ
ಶ್ರೀಮಾತಾ ಪ್ರಕಾಶನ,
ಅಂಬಿಕಾತನಯದತ್ತ ವೇದಿಕೆ, 'ವಿಶ್ವಶ್ರಮ ಚೇತನ', ಗೋಕುಲ ರಸ್ತೆ, ಹುಬ್ಬಳ್ಳಿ - ೫೮೦ ೦೩೦.

★



★

ಬೆಲೆ : ರೂ.೧೦೦-೦೦

★

ಆವೃತ್ತಿಗಳು :
೧೯೬೪, ೧೯೭೪, ೧೯೭೫, ೧೯೮೨, ೧೯೮೭, ೧೯೮೯, ೧೯೯೫
೮ನೆಯ ಮುದ್ರಣ : ೨೪-೧೧-೧೯೯೭,
ಒಂಭತ್ತನೆಯ ಮುದ್ರಣ : ೧೮-೫-೨೦೦೧.
ಹತ್ತನೆಯ ಮುದ್ರಣ : ೨-೧-೨೦೦೪
ಹನ್ನೊಂದನೆಯ ಮುದ್ರಣ:೨೫-೨-೨೦೦೫-ವರಕವಿ ಡಾ|| ದ.ರಾ.ಬೇಂದ್ರೆ ೧೦೯ನೇ ಜನ್ಮ ದಿನಾಚರಣೆ
ಹನ್ನೆರಡನೆಯ ಮುದ್ರಣ : ೧೮-೫-೨೦೧೦
ಹದಿಮೂರನೆಯ ಮುದ್ರಣ : ೨೩-೩-೨೦೧೨-ನಂದನಾಮ ಸಂವತ್ಸರದ ಪ್ರಾರಂಭ 'ಯುಗಾದಿ'
ಹದಿನಾಲ್ಕನೆಯ ಮುದ್ರಣ : ೨-೧-೨೦೧೩
ಹದಿನೈದನೆಯ ಮುದ್ರಣ : ೩೧-೧-೨೦೧೪
ಹದಿನಾರನೆಯ ಮುದ್ರಣ : ೧೮-೫-೨೦೧೫-ಪ್ರಕಟಣೆಯ ಸುವರ್ಣ ಮಹೋತ್ಸವ ವರ್ಷದ ಆವೃತ್ತಿ

★

ಆಕಾರ : ೧/೮ ಡೆಮ್ಮಿ
ಕಲೆ : ಶ್ರೀ ಸುರೇಶ ಕುಲಕರ್ಣಿ, ಧಾರವಾಡ

★

ಹೊರಹೊದಿಕೆ ವಿನ್ಯಾಸ : ಶ್ರೀ ರವೀಂದ್ರ, ವಿಶ್ವಜ್ಞ, ಧಾರವಾಡ

★

ಪುಟ ವಿನ್ಯಾಸ/ಡಿಟಿಪಿ : ಶ್ರೀ ಈರಣ್ಣನೂಲ್ವಿ , ಡಾ|| ಕೆ. ಎಸ್. ಶರ್ಮಾ ಐ.ಟಿ.ಸಿ., ಹುಬ್ಬಳ್ಳಿ

★

ಮುದ್ರಕರು :
ಶರ್ಮಾ ಮುದ್ರಕರು, ೪, ಪತ್ರಕರ್ತರ ಕಾಲನಿ, ಹುಬ್ಬಳ್ಳಿ - ೫೮೦ ೦೩೨.

★

ಕೃತಿಗಳಿಗಾಗಿ ಬರೆಯಿರಿ :
ಶ್ರೀಮಾತಾ ಪ್ರಕಾಶನ,
'ವಿಶ್ವಶ್ರಮ ಚೇತನ', ಗೋಕುಲ ರಸ್ತೆ, ಹುಬ್ಬಳ್ಳಿ - ೫೮೦ ೦೩೦. ದೂರವಾಣಿ : (೦೮೩೬) ೨೩೩೦೪೬೬.
ರವೀಂದ್ರ, ಪುಸ್ತಕಾಲಯ,
ಚಾಮರಾಜಪೇಟೆ, ಸಾಗರ -೫೭೭ ೪೦೧, ಜಿಲ್ಲಾ : ಶಿವಮೊಗ್ಗ. ದೂರವಾಣಿ : ೦೮೧೮೩-೨೨೮೬೧೬.

# ಪರಿವಿಡಿ

# ಮೊದಲ ಮುದ್ರಣಕ್ಕೆ ಮುನ್ನುಡಿ

''ಭೋಗಸಾಧನೆಯ ಕವನ ಭಾಂಡಾರವೂ ಇದೆ. ಯೋಗಸಾಧನೆಯ ಕವನ ಮಾರ್ಗವೂ ಇದೆ''. ಸಾಮಾನ್ಯತೆಯ ಅಜ್ಞಾನ, ಅಹಂಕಾರಗಳಿಗೆ ನಾವು ಪಟ್ಟಗಟ್ಟಿ ಅದನ್ನು ಶಿಲಾಶಾಪಕ್ಕೆ ಗುರಿಪಡಿಸಬಾರದು. ರಾಮಪಾದಸ್ಪರ್ಶ ಅದಕ್ಕೂ ಬೇಕು. ಆ ದಿವ್ಯದರ್ಶನದಲ್ಲಿ ವ್ಯಾಧನು ವಾಲ್ಮೀಕಿಯಾಗುತ್ತಾನೆ. ಇಂಥ ಹುತ್ತದ ಸುತ್ತ ಆನು, ತಾನು, ನಾನು, ನೀನಿ ನ ನಾಕುತಂತಿಯ ಈ ಚೌದಂತ ವೀಣೆ ಮಿಡಿಯುತ್ತಿದೆ. ''ಬೇಕಾದರಾಲಿಸುವುದು; ಬೇಡವಾದರೆ ಪರಾಕು ಮಾಡುವುದು'' ಎನ್ನುವುದು ಔದ್ಧತ್ಯ ಎನಿಸಿಕೊಳ್ಳಬಾರದು. ಭವ್ಯರು ಲಾಲಿಸಬಹುದು. ಭವಿ, ಭಕ್ತರನ್ನು ಜೋಡಿಸುವ ಭವ್ಯ ಪಥ ಇದು.

ಕ್ಲಿಷ್ಟತೆ, ದುರೂಹತೆ, ಅವರವರ ಸಂಸ್ಕಾರ ಬಂಧನಗಳು. ಸಮ್ಯಕ್ ಶಿಕ್ಷಣದಿಂದಲೇ ಹಳೆಯ ಬಂಧ ಹರಿಯಬೇಕು, ಹೊಸ ಸಂಬಂಧ ತೆರೆಯಬೇಕು. ಅಂಬಿಕಾತನಯದತ್ತನ ಕವನಗಳಿಗೆ ಸ್ವಾಗತ ನೀಡುತ್ತ ಬಂದಿರುವ ಸಹೃದಯರಿಗೆಲ್ಲ 'ಬೇಂದ್ರೆ' ಆಭಾರಿಯಾಗಿದ್ದಾನೆ; ತನ್ನ ಲಿಪಿಕಾರತೆಯ ಕಾಯಕ ವ್ಯರ್ಥವಲ್ಲವೆಂದು, ತನ್ನ ಸ್ವಚ್ಛಂದ ಗಮಕ ಕೇವಲ ನಿಷ್ಫಲವಲ್ಲವೆಂದು. ಈ ಪದಗಳನ್ನು ನೋಡಿ, ಕೇಳಿ ಕ್ಷೋಭೆಗೊಳ್ಳುವವರಿಗೂ, ತಾತ್ಸಾರಗೊಳ್ಳುವವರಿಗೂ 'ಪ್ರೊ.ಬೇಂ.ಮಾ' ಸಹಾನುಭೂತಿ ತೋರಿಸದೆ ಇರಲಾರ. ಆದರೂ ಎಲ್ಲದಕ್ಕೂ ಮೇರೆ ಬೇಕು. ಶಿವರೇಖೆಗಳನ್ನು ರೌದ್ರಭಾವದಿಂದ ಆಕ್ರಮಿಸಬಾರದು-ಇಷ್ಟೇ ಪ್ರಾರ್ಥನೆ.

ಈ ಸಂಗ್ರಹವನ್ನೂ ಸಾಕಷ್ಟು ಅಂದಚಂದವಾಗಿ ಮುದ್ರಿಸಿ ೧೯೬೪ರ ಕಾಣಿಕೆ ರೂಪಗೊಳಿಸುವಲ್ಲಿ ಅನುಕೂಲರಾದ ಶ್ರೀಮಾನ್ ಘಾಣೇಕರತ್ರಯರಿಗೆ ನನ್ನ ಅಭಿನಂದನೆಗಳು. ಸಹೃದಯರಿಗಂತೂ ಸಹಸ್ರ ವಂದನೆಗಳು.

ಬೇಗನೆ ಇನ್ನೊಂದು ಕವನ ಸಂಗ್ರಹ ಬೆಳಕಿಗೆ ತರಬೇಕೆಂಬ ನಿರೀಕ್ಷೆಯಲ್ಲಿದ್ದೇನೆ. ಚಿ. ವಾಮನ ಬೇಂದ್ರೆ ಮಾಡಿದ ಸಹಕಾರವು ಕರ್ತವ್ಯದ ಒಂದು ಭಾಗವೇ ಆಗಿದೆ. ಅದರ ಸ್ಮರಣೆಯನ್ನೂ ಇಲ್ಲಿ ಉಲ್ಲೇಖಿಸುತ್ತಿದ್ದೇನೆ. ಜಿಜ್ಞಾಸಾ ಸಮರ್ಥರು, ಮುನ್ನುಡಿಯನ್ನೂ, ಸಂದರ್ಭ ಟಿಪ್ಪಣಿಗಳನ್ನೂ ಅವಶ್ಯ ಓದಬೇಕು. ಸವಿನಯ ಬಿನ್ನಹ.

೨೫-೧೨-೧೯೬೪ ದ. ರಾ. ಬೇಂದ್ರೆ

# ಹದಿನಾರನೆಯ ಆವೃತ್ತಿಯ ಅನಾವರಣ :
## ಪ್ರಕಟಣೆಯ ಸುವರ್ಣ ಮಹೋತ್ಸವ ವರ್ಷದ ಆವೃತ್ತಿಗಾಗಿ

ವರಕವಿ ಡಾ|| ದ. ರಾ. ಬೇಂದ್ರೆಯವರ ''ನಾಕುತಂತಿ''ಯ ಪ್ರಥಮ ಮುದ್ರಣವಾದದ್ದು ೧೯೬೪ರಲ್ಲಿ. ಈ ಮಾತಿಗೆ ಈಗ ೫೦ ವರುಷಗಳು ದಾಟಿ, ೫೧ ವರುಷದಲ್ಲಿ ನಡೆಯುತ್ತಿರುವಾಗ, ಈ ಕೃತಿಯ ಹದಿನಾರನೆಯ ಆವೃತ್ತಿಯನ್ನು ಲೋಕಾರ್ಪಣೆ ಮಾಡಲು ಅತೀವ ಆನಂದವಾಗುತ್ತಿದೆ. ಈ ಕೃತಿಯು ಸುವರ್ಣ ಮಹೋತ್ಸವ ವರ್ಷದ ಕೃತಿ. ೧೯೭೪ರಲ್ಲಿ ರಾಷ್ಟ್ರದ ಅತ್ಯುಚ್ಚ ಸಾಹಿತ್ಯ ಪ್ರಶಸ್ತಿಯಾದ ''ಜ್ಞಾನಪೀಠ ಪ್ರಶಸ್ತಿ''ಯನ್ನು ''ನಾಕುತಂತಿ''ಗೆ ಪ್ರದಾನ ಮಾಡಲಾಯಿತು. ಈ ಕೃತಿಯ ಮುನ್ನುಡಿಯಲ್ಲಿ ವರಕವಿ ಡಾ|| ದ. ರಾ. ಬೇಂದ್ರೆಯವರು ಒಂದು ಮಹತ್ವದ ಮಾತನ್ನು ನುಡಿದಿದ್ದಾರೆ- ''ಭೋಗ ಸಾಧನೆಯ ಕವನ ಭಾಂಡಾರವೂ ಇದೆ. ಯೋಗ ಸಾಧನೆಯ ಕವನ ಮಾರ್ಗವೂ ಇದೆ'' ಎಂದು. ಈ ನುಡಿಯು ಅತ್ಯಂತ ಮಾರ್ಮಿಕವಾಗಿದೆ. ಅಂಬಿಕಾತನಯದತ್ತ (ದ. ರಾ. ಬೇಂದ್ರೆ)ರು ತಮ್ಮ ಕಾವ್ಯ ಪ್ರಕ್ರಿಯೆಯನ್ನು ಕಾವ್ಯೋದ್ಯೋಗ (ಕಾವ್ಯ+ಉತ್+ಯೋಗ) ಎಂದು ಬಣ್ಣಿಸಿರುವುದನ್ನು ಗಮನಿಸಿದಾಗ, ಮೇಲಿನ ನುಡಿಯ ಔಚಿತ್ಯದ ಅರ್ಥವಾಗುತ್ತದೆ. ಅದರಲ್ಲೂ ದ. ರಾ. ಬೇಂದ್ರೆಯವರು ತಮ್ಮ ಸಮಗ್ರ ಕಾವ್ಯ ''ಔದುಂಬರಗಾಥೆ''ಯನ್ನು ''ಜೀವನ ಮಹಾಕಾವ್ಯ'' ಎಂದು ಬಣ್ಣಿಸಿರುವುದನ್ನು ಅರ್ಥೈಸಿದಾಗ, ಜೀವನವೇ ಕಾವ್ಯವಾಗಿ, ಕಾವ್ಯವೇ ಜೀವನವಾಗಿ ಪರಿಗಣಿಸಿದ ಅಂಬಿಕಾತನಯದತ್ತರ ಕಾವ್ಯದ ಔನ್ನತ್ಯ ಹಾಗೂ ಔಚಿತ್ಯ ತಿಳಿಯದೇ ಇರಲಾರದು.

ಈ ಹಿನ್ನೆಲೆಯಲ್ಲಿ ''ನಾಕುತಂತಿ'' ಅತ್ಯಂತ ಜನಪ್ರಿಯತೆಯನ್ನು ಹೊಂದುವುದರೊಡನೆ, ವಿಮರ್ಶಕರ ಮೆಚ್ಚುಗೆಯನ್ನು ಪಡೆದಿರುವುದು ಯಥೋಚಿತವೇ ಆಗಿದೆ. ಈ ರೀತಿಯಾಗಿ ನಿರಂತರವಾಗಿ ಸ್ಪಂದಿಸುತ್ತಾ ಬಂದಿರುವ ಪಂಡಿತ-ಪಾಮರರಿಗೆ ಬೇಂದ್ರೆ ಸಂಶೋಧನ ಸಂಸ್ಥೆ ತನ್ನ ಕೃತಜ್ಞತೆಯನ್ನು ಅರ್ಪಿಸುತ್ತದೆ. ರಸಿಕ ಸಮೀಕ್ಷಕರಿಗೆ ಆತ್ಮೀಯ ನಮನಗಳನ್ನು ಅರ್ಪಿಸುತ್ತದೆ.

ವರಕವಿಗಳು ತಮಗೆ ದಿಲ್ಲಿಯಲ್ಲಿ ಜ್ಞಾನಪೀಠ ಪ್ರಶಸ್ತಿಯನ್ನು ಪ್ರದಾನ ಮಾಡಿದಾಗ ಮಾಡಿದ ಭಾಷಣದ ಪೂರ್ಣಪಾಠವನ್ನು ಹನ್ನೊಂದನೆಯ ಆವೃತ್ತಿಯಲ್ಲಿ ಪ್ರಕಟಿಸಿದ್ದು, ಈ ಕೃತಿಯ ಅನುಬಂಧಗಳಲ್ಲಿ ಮತ್ತೆ ಅದನ್ನು ಸೇರ್ಪಡೆ ಮಾಡಿದ್ದೇವೆ. ಓದುಗರಿಗೆ ಈ ಪ್ರಶಸ್ತಿಯನ್ನು ಪಡೆದ ಕವಿಮನ ಹೇಗೆ ಇದಕ್ಕೆ ಸ್ಪಂದಿಸಿತ್ತು ಎಂಬುದರ ಬಿಂಬದರ್ಶನ ಈ ಭಾಷಣವೆನ್ನಬಹುದಾಗಿದೆ. ಇದಲ್ಲದೆ, ಕರ್ನಾಟಕದ ಇನ್ನೋರ್ವ ಜ್ಞಾನಪೀಠ ಪ್ರಶಸ್ತಿ ವಿಜೇತರಾದ ಡಾ|| ವಿನಾಯಕ ಕೃಷ್ಣ ಗೋಕಾಕರು ''ನಾಕುತಂತಿ'' ಕುರಿತು ವಿಶೇಷ ಪ್ರಬಂಧವನ್ನು ಇಂಗ್ಲೀಷಿನಲ್ಲಿ ಬರೆದಿದ್ದರು. ಇವರ ಈ ಮೌಲ್ಯಮಾಪನ ಸಾಹಿತ್ಯ ವಿಮರ್ಶೆಗೆ ಒಂದು ಹೊಸ ಆಳತೆಗೋಲನ್ನು ಒದಗಿಸುವಂತಿದೆ. ಅಂತೆಯೇ ''ನಾಕುತಂತಿ''ಗೆ ಹೊಸ ದೃಷ್ಟಿಯನ್ನೂ ಈ ಮೌಲ್ಯಮಾಪನ ಒದಗಿಸುತ್ತದೆ. ಈ ಎರಡು ಪ್ರಬಂಧಗಳು ಹಾಗೂ ಬೇಂದ್ರೆಯವರ ಚಿರಂಜೀವಿಗಳೂ, ಬೇಂದ್ರೆ ಸಂಶೋಧನ ಸಂಸ್ಥೆಯ ಸಹ ನಿರ್ದೇಶಕರೂ ಆದ ಡಾ|| ವಾಮನ ಬೇಂದ್ರೆಯವರು ಬರೆದ ಪಾಂಡಿತ್ಯಪೂರ್ಣ ಭೂಮಿಕೆಯನ್ನು ಕೂಡ ಹಾಗೆಯೇ ಉಳಿಸಿಕೊಂಡಿದ್ದೇವೆ. ಇವೆಲ್ಲವೂ ಈ ಕೃತಿಯ ಅರ್ಥಗ್ರಹಿಕೆಗೆ ಹಾಗೂ ಮೌಲ್ಯಮಾಪನಕ್ಕೆ ಹೊಸ ಅಂತಃದೃಷ್ಟಿಯನ್ನು ಒದಗಿಸಬಲ್ಲವೆಂಬ ವಿಶ್ವಾಸ ನಮ್ಮದಾಗಿದೆ. ಹಿಂದಿನ ಆವೃತ್ತಿಯ ಎಲ್ಲ ವಿಶೇಷತೆಗಳನ್ನು ಉಳಿಸಿಕೊಂಡು, ಈಗ ಹದಿನಾರನೆಯ ಆವೃತ್ತಿಯನ್ನು ಅಂದರೆ, ಈ ಕೃತಿಯ ''ಸುವರ್ಣ ಮಹೋತ್ಸವ ವರ್ಷ''ದ ಆವೃತ್ತಿಯನ್ನು ಪ್ರಕಟಿಸಿದ್ದೇವೆ. ಎಂದಿನಂತೆ ತಮ್ಮ ಆದರವೇ ನಮ್ಮ ಬಲ. ಆ ಬಲವನ್ನು ಈ ಆವೃತ್ತಿಗೂ ತೋರಬೇಕೆಂದು ಕೋರುತ್ತೇನೆ.

ಡಾ|| ಕೆ. ಎಸ್. ಶರ್ಮಾ
ನಿರ್ದೇಶಕರು
ವರಕವಿ ಡಾ|| ದ. ರಾ. ಬೇಂದ್ರೆ
ಸಂಶೋಧನ ಸಂಸ್ಥೆ ಹಾಗೂ ಬೇಂದ್ರೆ ಸಂಗೀತ ಅಕಾಡಮಿ.

''ಬೇಂದ್ರೆ ಕುಟೀರ'',
ಹುಬ್ಬಳ್ಳಿ - ೩೦
೧೮-೫-೨೦೧೫

ಕಾರ್ಯಸ್ಥಳ : ''ಬೇಂದ್ರೆ ಕುಟೀರ'', ವಿಶ್ರಮ ಚೇತನ, ಗೋಕುಲ ರಸ್ತೆ, ಹುಬ್ಬಳ್ಳಿ-೫೮೦ ೦೩೦. ದೂರವಾಣಿ : ೨೩೩೦೪೬೬

ಪ್ರಥಮ ಆವೃತ್ತಿ ಮುಖಪುಟ - ೧೯೬೪




## ಭೂಮಿಕೆ

"ನಾನೀನ ನುಡಿ ನುಂಗಿ ತಾನೀನ ತಾನೇ ತಾ
ತಾನಾಗಿ ತನನನನ ಬಂಧ್ಹಾಂಗ"

ಎಂದು ಅಂಬಿಕಾತನಯದತ್ತರು 'ಮಾಯಾಕಿನ್ನರಿ' (ಇ.ಸ. ೧೯೩೭) ಬರೆದರು. ೧೯೬೪ ರಲ್ಲಿ 'ತಾನಾಗಿ ತನನನನ ಬಂಧ್ಹಾಂಗ' 'ನಾಕು ತಂತಿ' ಬಂತು. ಇದೊಂದು ಉದ್ಭವ ಕಾವ್ಯ. ಭಾವಗೀತಕಾರನ ಮಹಾಕಾವ್ಯ.

'ನಾಕು ತಂತಿ'ಯ ಮೊದಲ ಮುದ್ರಣ (೧೯೬೪) ಹೊರಬರುವಾಗ ಕವಿಯ ವಯಸ್ಸು ಅರವತ್ತೆಂಟು. ಈ ಕವನಸಂಗ್ರಹದೊಳಗಿನ ಎಲ್ಲ ಕವನಗಳು ಅರವತ್ತೆಂಟನೆಯ ವರ್ಷವೇ ಬರೆದವುಗಳಲ್ಲ. 'ನಾಕು ತಂತಿ' ಸುದೀರ್ಘವಾಗಿ ಒಂದೇ ಕವನವಲ್ಲ. ನಲವತ್ತು ನಾಲ್ಕು ಕವನಗಳಿಂದೊಡಗೂಡಿದೆ ಈ ಕವನ ಸಂಕಲನ, ಕವಿಯ ವಯಸ್ಸಿನ ಉತ್ತರಕಾಲಖಂಡದಲ್ಲಿ ಹೆಚ್ಚಾಗಿ ರೂಪಗೊಂಡಿದ್ದು ಎಂಬುದನ್ನು ಗಮನಿಸಬೇಕಾಗುತ್ತದೆ.

ಶ್ರಾವಣಮಾಸ-ಬೇಂದ್ರೆಯವರ ಜೀವನದಲ್ಲಿಯ ಸುಖ-ದುಃಖ ಮಾಲೆಗಳ ಮಾಸ. ಆದುದರಿಂದ ಅಂಬಿಕತನಯದತ್ತರಿಗೆ ಶ್ರಾವಣದ ಚಿಂತನೆ ಸಹಜ. ಈ ಕವನ ಸಂಗ್ರಹದೊಳಗಿನ ಮೊದಲ ಎರಡು ಕವನಗಳಲ್ಲಿ ಶ್ರಾವಣಮಾಸದ ಬೋಧವನ್ನು ತಮಗಾದಂತೆ-ಕವಿಗಳು ವರ್ಣಿಸಿದ್ದಾರೆ. ಶ್ರಾವಣಕ್ಕೂ-ಶ್ರವಣೇಂದ್ರಿಯಕ್ಕೂ ಏನೋ ಸಂಬಂಧವಿರಬೇಕು ಎಂದು ಕವಿಗೆ ತೋರಿದೆ. ಆದುದರಿಂದ ಕವಿ, ಶ್ರುತಿಯತ್ತ ಗಮನಕೊಟ್ಟು ಕೃತಿ ರಚಿಸುವ ಹಂಬಲ ಉಳ್ಳವನಾಗಿದ್ದಾನೆ.

ಕಂಠ ಸಂಗೀತ, ವಾದ್ಯ ಸಂಗೀತ, ನೃತ್ಯ ಮೊದಲಾದ ಕಲಾಭ್ಯಾಸಿಗಳು 'ಗಂಡಾ

ಸಮಾರಂಭ' ಮಾಡುವಂತೆ, ಸಾಹಿತಿಗಳಲ್ಲಿ ಕವಿಗಳಲ್ಲಿ ಸಮಾರಂಭ ಮಾಡುವ ಪದ್ಧತಿ ಇದ್ದಂತೆ ತೋರುವದಿಲ್ಲ. ಆದರೆ ಕವಿಗಳು ತಮ್ಮ ಕಾವ್ಯದ ಪೀಠಿಕಾ ಪದ್ಯಗಳಲ್ಲಿ 'ಗಂಡಾ ಸಮಾರಂಭ'ದ ಕಾರ್ಯ ಮುಗಿಸಿಬಿಡುತ್ತಾರೆ ಎಂದು ತೋರುತ್ತದೆ. ಗುರು ಕಲಿಸಿದಂತೆ ಕಲಿಸಿದ್ದನ್ನಷ್ಟೆ ಹಾಡುವವನು ಎಂದಿಗೂ ಉನ್ನತ ಶಿಖರವನ್ನು ಮುಟ್ಟಲಾರ. ಗುರುಸ್ಮರಣೆಯಿಂದ ಹಾಡುವಾಗ, ಬಾರಿಸುವಾಗ, ಅಕಲ್ಪಿತ, ಅನಿರ್ವಚನೀಯ ರಾಗಾಲಾಪ, ತಾಲ ವಿಲಾಸ ಯಾವನು ಕಂಡುಕೊಳ್ಳುವನೋ ಅವನು ಆಗ, ಆದೇ ಕಲೆಯ ಗೌರಿಶಂಕರ ಶಿಖರ ಎಂದು ತಿಳಿಯಬೇಕಾಗುತ್ತದೆ. ಹಾಗೆ ಅಂಬಿಕಾತಯನದತ್ತರು ನಾಕು ತಂತಿಯ ಒಂದು ವೀಣೆಯನ್ನು ಶ್ರುತಿಗೊಳಿಸಿ ಕಿವಿಯ ಹತ್ತಿರಕ್ಕೆ ಹಿಡಿದು- "ಲುಸಿಕಾ। ಲುಸಿಕಾ। ಎಂದೊರೆದು, ಮಿಡಿದು ತಂತಿಯ ಹೆಣಿಗೆಯನು -ಅರಿ-ಇರು। ಹರಿ-ಹರಹರ, ಗಿರಿಗಿರಿ ಸುತ್ತೀ ಇಳಿ ಇಳಿಗೆ. ಈ ಗಳಿಗೆ ಆ ಗಳಿಗೆ"-ಎಂದೂ ಪ್ರಾರ್ಥಿಸಿದ್ದಾರೆ ಎಂದು ನನಗೆ ತೋರುತ್ತದೆ.

ಈ ಕಾವ್ಯಸಾಧನೆಯಲ್ಲಿ-ಹರಿ, ಹರ, ಗಣಪತಿ, ನಂದಿ, ಹನುಮ, ಗರುಡ, ಇಲಿ, ಸೂರ್ಯ, ಚಂದ್ರ, ಬ್ರಹ್ಮ ಸರಸ್ವತಿ ಮೊದಲಾದ ದೇವತೆಗಳ ಮತ್ತು ಅವರ ವಾಹನಗಳಾದ ದಾಸಶ್ರೇಷ್ಠರ ಸ್ಮರಣೆಯಿಂದ ಕಾವ್ಯಸಾಧನೆಯನ್ನು ಮಾಡುವಾಗ ಕವಿ ಸ್ವತಂತ್ರನಲ್ಲ. ಶಬ್ದಗಳು ಹೇಗೆ ಹೊಂದಿಕೊಂಡು ಬರುತ್ತವೋ ಹಾಗೆಯೇ ಅವುಗಳನ್ನು ಇಟ್ಟು ಬಿಡುವುದು ಅನಿವಾರ್ಯವಾಗಿಬಿಡುತ್ತದೆ. ಮೈದಂಡಿಗೆ ಮಾಡಿ, ಕವಿ ಹಾಡುವಾಗ-

"ಕೈಲಾಸದ ಬುಡಕಽ ಸಿಕ್ಕವನಾ! ಹತ್ತು ತಲೆಯವನಾ
ಬಿಡಿಸೋ ! ಹಿಡಿಸೊ ! ಆತ್ಮಾರಾಮನ ಭವನಾ ! ಶಿವನಾ
ಹರ-ಹರಿ ಒಂದಾದವನಾ ! ದವನಾ ........ " ಅಥವಾ

"ಭಾಲಚಂದ್ರಾ ಏಕದಂತಾ, ಕುಣಿ, ಇಲಿ ವಿಲಿವಿಲಿ
ತದ್ಧಿತಾಂತಾ. ಕೃದಂತಾ, ವಕ್ರದಂತಾ
ಸ್ವಭಾವೋಕ್ತಾ ವಕ್ರಾ ! ವಕ್ರತುಂಡಾ...."

ಇತ್ಯಾದಿಯಾಗಿ ಶಬ್ದಗಳು ಹೊಂದಿಕೊಂಡು ಬಂದುಬಿಡುತ್ತವೆ. ಇವು ಹೀಗೇಕೆ ಬರುತ್ತವೆ ಎಂದರೆ ಇದಕ್ಕೆ ಉತ್ತರವಿಲ್ಲ. ಭಕ್ತಿಯ ಆವೇಶದಲ್ಲಿ ಬಾರಿಸುವ ನಗಾರಿ, ಡೊಳ್ಳು, ಸನಾದಿ, ಹಿತ್ತಾಳಿಯ ಝಾಂಜು ಸತತ ಏಕನಾದವನ್ನು ಎಂದಿಗೂ ಕೊಡುವದಿಲ್ಲ. ಅದು ಬೇಜಾರು ಹುಟ್ಟಿಸುವ ಏಕತಾನವಾಗಿರುವದಿಲ್ಲ. ಆ ವಾದ್ಯ ದ್ರವ್ಯ ಮತ್ತು ಬಾರಿಸುವವನ ಭಕ್ತಿಯ ಆವೇಶ ಸಂವಾದಿಯಾಗಿರುತ್ತದೆ. ಅಂಬಿಕಾತನಯದತ್ತರ 'ನಾಕು ತಂತಿ' ಈ ಕವನ ಸಂಗ್ರಹದ ಜಾತಿ ಇಂಥದು. ಆವೇಶಕ್ಕೆ ಸಂವಾದಿಯಾಗಿ ಅವರು ಸಾಗಿಬಿಡುತ್ತಾರೆ. ಕೈಲಾಸದ ಬುಡಕ್ಕೆ ಸಿಕ್ಕ ಹತ್ತು ತಲೆಯ ರಾವಣ, ಶಿವ, ರಾಮ ಅವರ ಕವನ ವಿಷಯಗಳೇ ಅಲ್ಲ, ಅಹಂಕಾರದ ಬಿಡುಗಡೆಯಾಗಿ ಆತ್ಮಾರಾಮನ ಚಿಂತನೆಯಾಗಬೇಕು ಎಂಬ ಅಭೀಪ್ಸೆಯ ಸಂಕೇತವಾಗಿ ಶಬ್ದ

ಜೋಡಣೆ ಬಂದುಬಿಟ್ಟದೆ. ಅದನ್ನು ಅವರು ಇಟ್ಟು ಬಿಟ್ಟಿದ್ದಾರೆ.

ಅಂಬಿಕಾತನಯದತ್ತರು ಮಿಡಿಯುವ ವೀಣೆಗೆ ನಾನು, ನೀನು, ಆನು, ತಾನು ಎಂಬ ನಾಕೇ ನಾಕು ತಂತಿ ಎಂದು ಅವರೇ ಹೇಳಿದ್ದಾರೆ. ನಾನು-ತಂದೆ, ನೀನು-ತಾಯಿ, ಆನು-ಇವರಿಬ್ಬರ ಆಧಾರವಾಗಿ ಬರುವ ಮಗು ಮತ್ತು ಈ ಕುಟುಂಬ ಸಂಸ್ಥೆಗೆ ಸ್ವಸ್ತಿ, ಶುಭಂ ಎನ್ನುವ ಪರಮಾತ್ಮಶಕ್ತಿ ತಾನು ಎಂಬುದು ಕವಿಯ ಭಾವ. ತಂದೆ, ತಾಯಿ, ಮಗು ಬಿಟ್ಟರೆ ಜಗತ್ತಿನಲ್ಲಿ ಬೇರೆ ಏನೂ ಇಲ್ಲ. ಇವರ ಕಲಹವೇ ಇತಿಹಾಸ. ಇವರಲ್ಲಿ ಶಾಂತಿ ಪ್ರತಾಷ್ಠಾಪಿತಗೊಳ್ಳುವುದೇ ದೇವಜನ್ಮ, ನವಯುಗ. ಈ ಸೂತ್ರವನ್ನು ಅನುಸರಿಸಿ 'ನಾಕುತಂತಿ' ಯೊಳಗಿನ ಅನೇಕ ಕವನಗಳು ರೂಪುಗೊಂಡಿವೆ.

'ಅಣೋರಣೀಯಾನ್ ಮಹತೋ ಮಹೀಯಾನ್' ಎಂಬುದು ಭಕ್ತರು ಒಪ್ಪುವ ಪರಮಾತ್ಮನ ಸ್ವರೂಪವಾಗಿದೆ. ಭಕ್ತರು ದೇಹಧಾರಿಗಳು. ಅವರಿಗೆ ದೈಹಿಕ ಕಣ್ಣು-ಲೋಚನಗಳಿವೆ, ಅವರೆದುರು ವಿಶಾಲವಾದ-ಲೋಕ ಹಬ್ಬಿದೆ, ಈ ಕಣ್ಣುಗಳಿಗೆ ಲೋಕದ ಜ್ಞಾನ ಮತ್ತು ಸ್ನೇಹ ಎಂಬ ತತ್ತ್ವಗಳ ಅರಿವು ಆಗುವುದು ಹೇಗೆ ಎಂಬ ಪ್ರಶ್ನೆ ಕವಿಗೆ 'ಅಣು ಮಹತ್' ನಲ್ಲಿ ಬಂದಿದೆ. 'ಕಣ್ಣೆ ಕನ್ನಡಿಯಾಗಿ ಕಂಡಿದ್ದು ನೋಡಿದ್ದು ಒಂದಾಯಿತು. ಇರುವು ಇರವಿನೊಳಿತ್ತು, ಅರಿವು ಅರಿವಿನೊಳಿತ್ತು ; ಇರುವ ಅರಿವೂ ಹರಿವು ನಂದಾಯಿತು' ಎಂದು ಕವಿ ಸಮಾಧಾನ ಮಾಡಿಕೊಳ್ಳುತ್ತಾನೆ. ಇರುವು, ಅರಿವು ಮತ್ತು ಹರಿವು ಇವುಗಳ ಚಿಂತನೆಯನ್ನು ಮಾಡುವುದು ಬೇಂದ್ರೆ-ಯವರ ಪೂರ್ಣಾವಧಿಯ ಹವ್ಯಾಸವಾಗಿದೆ. ಈ ಚಿಂತನೆಯ ವಿವಿಧ ಅಭಿವ್ಯಕ್ತಿಯನ್ನು 'ಸಾದೃಶ್ಯ' 'ಅಹಂ ಇದಂ' 'ಬಯಲ್' ಮತ್ತು 'ಪ್ರಬುದ್ಧ' ಪದ್ಯಗಳಲ್ಲಿ ಕಾಣಬಹುದು.

ಗೋವಿಂದ ಪೈ ಇವರ ಜ್ಞಾನ ಜಿಜ್ಞಾಸೆ, ದೇವುಡು ಅವರ ಜೀವನವನ್ನೇ ನಾಟಕವನ್ನಾಗಿ ನೋಡುವ ದೃಷ್ಟಿ ಮತ್ತು ವಿವೇಕಾನಂದರ ಆನಂದಶಕ್ತಿ ಇವುಗಳನ್ನು ಬೇಂದ್ರೆಯವರು ಮೆಚ್ಚಿ ಶ್ರದ್ಧಾಂಜಲಿ ಕವನಗಳನ್ನು ರಚಿಸಿದ್ದಾರೆ. 'ಶ್ರೀ ವಿವೇಕಾನಂದ ಶಿಖರ- ಪ್ರಗಾಥಾ'ದಲ್ಲಿ ಶೃಂಗೇರಿ, ಶ್ರೀಶೈಲ, ತಿರುಮಲೆ, ಉಡುಪಿ, ಆಳಂದ, ಪಂಢರಪುರ, ಗೊಮ್ಮಟ, ಕನ್ಯಾಕುಮಾರಿ, ಕಾಶ್ಮೀರ ಮೊದಲಾದವುಗಳ ಸಾಂಕೇತಿಕ ಮಹಾತ್ಮ್ಯದ ಉಲ್ಲೇಖ ಬರುತ್ತದೆ. ಈ ಎಲ್ಲ ಸ್ಥಳಮಹಾತ್ಮ್ಯಗಳ ಕೇಂದ್ರ ಶಕ್ತಿ ಆನಂದ. ಧರ್ಮಸಂಸ್ಥಾಪನೆ (ವೃಷೋ ಧರ್ಮಃ) ಇವುಗಳ ಗುರಿ. ಈ ವಿವೇಕವನ್ನು ನಾವು ಪಡೆದದ್ದಾದರೆ ನಮ್ಮಲ್ಲಿ ಆನಂದಶಕ್ತಿ ಉದಯಿಸಿ, ನಾವು ಶಿವಕಾರ್ಯ-ಶುಭಕಾರ್ಯ ಮಾಡಬಹುದು ಎಂಬ ಸದ್ಭಾವವು ಈ ಕವನಗಳಲ್ಲಿ ರೂಪುಗೊಂಡಿದೆ.

ಜನ್ಮದಿಂದ ಬಂದ ಮುಖ ನಿಜವೋ ? ಕನ್ನಡಿಯಲ್ಲಿ ಕಾಣುವ ಮುಖದ ಪ್ರತಿಬಿಂಬ ನಿಜವೋ ಎಂಬುದು 'ಅಹಂ ಇದಂ' ಕವನದ ಚಿಂತನೆಯ ವಿಸ್ತಾರ. 'ಮಾತು ಕೃತಿ' ಯಿಂದ

ಹಿಂದಿ ಆಗಿದ್ದರೂ, ಕನ್ನಡ ಪದ್ಯಪ್ರವಾಹಕ್ಕೆ ತೆಕ್ಕಿ ಮುಕ್ಕಿ ಬಿದ್ದು ತೇಲಿ ಬರುತ್ತವೆ. ಕನ್ನಡ ಭಾಷೆಯನ್ನು ಮಾತನಾಡುವಾಗ ಇಂಗ್ಲಿಷ, ಹಿಂದಿ ಪದಗಳನ್ನು ಬಳಸಬಹುದಾದರೆ, ಕಾವ್ಯದಲ್ಲಿ ಏಕೆ ಬೇಡ? ಮಾಹೂಽ, ಬೇಹೂಽ, ನೀಹೂಗಳೊಳಗಿನ ಹೂ; ಮಾಡೂಽ, ಹಾಡೂಽ, ನೀಡೂಽಗಳೊಳಗಿನ ಡೂ ಮತ್ತು ಸಾಕೂಽ, ನಾಕೂ, ಬೇಕೂಽಗಳೊಳಗಿನ ಕೂ ಸೇರಿ 'ಹುಡುಕು' ಎಂಬ ಶಬ್ದವಾಯಿತು. ಹುಡುಕು ಎಂಬ ಶಬ್ದಕ್ಕೆ ಶೋಧನೆ ಎಂದು ಅರ್ಥ. ಆತ್ಮಸಂಶೋಧನೆ ಎಂಬುದು ವಿಶಿಷ್ಟ ಭಾವ. ಇದೇ ರೀತಿ ಆತನೋ? ಆತ್ಮನೋ? ಅವನೋ? ಅವ್ವನೋ? ಅಪ್ಪನೋ? ಅಪ್ಪುವನೋ? ತಪ್ಪುವನೋ? ಒಪ್ಪುವನೋ? ಇವುಗಳಲ್ಲಿಯ 'ನೋ'ದ ಅರ್ಥ ಮತ್ತು ಭಾವವನ್ನು ಕವಿಗಳು ಹುಡುಕಾಡಿದ್ದಾರೆ. ವರ್ಣ - ಶಬ್ದ - ಅರ್ಥ - ಭಾವ ಸಂಬಂಧವನ್ನು ಹೇಳುವುದೇ ನಿರುಕ್ತ. ಬತ್ತಿ ಎಂಬ ಒಂದು ಪದಕ್ಕೆ ಈ ಮತ್ತು ಹೂ ಎಂಬ ಉಪಸರ್ಗ ಹತ್ತಿಸಿದಾಗ-'ಈಬತ್ತಿ ' ಮತ್ತು 'ಹೂಬತ್ತಿ', ಎಂಬ ಸಾಧಿತ ಪದಗಳಾಗುತ್ತವೆ. 'ಈಬತ್ತಿ ' ಶೈವರದು, 'ಹೂಬತ್ತಿ' ಇತರರದು ಎಂಬ ಭಾವ. ಹೀಗೆ ಪದಗಳ ಸಾಧಿತರೂಪವಾಗುವುದು ಕನ್ನಡದ ಜಾಯಮಾನದ ವೈಶಿಷ್ಟ್ಯ.

ಕಾಮವನ್ನು ಈಶಾರ್ಪಿತ ಮಾಡಿದರೆ, ಈಶನ ನಾಮಸ್ಮರಣೆಯನ್ನು ಸದಾಕಾಲ ಮಾಡಿದರೆ, ಈಶನು ನಮ್ಮಲ್ಲಿಯ 'ನಾ' ಅಹಂಕಾರವನ್ನು ಅಪಹರಿಸುತ್ತಾನೆ. ನಾಮ ಎಂಬುದು, ಭಕ್ತ ಮತ್ತು ಭಗವಂತ ಇವರಲ್ಲಿಯ ಪ್ರೇಮಸೂತ್ರ. ಇದು ವಿಶ್ವವಿಶಾಲ. ಆದುದರಿಂದಲೇ 'ನಾಮ - ಭೂಮಾ - ಪ್ರೇಮಾ' ಎಂದಿದ್ದಾರೆ - ಅಂಬಿಕಾತನಯದತ್ತರು.

ಪರಾ, ಪಶ್ಯಂತಿ, ಮಧ್ಯಮಾ ಮತ್ತು ವೈಖರಿ ಎಂದು 'ವಾಕ್' ಶಕ್ತಿಯ ನಾಕು ನೆಲೆಗಳು. ಪರಾ ಎಂಬುದು ಎಲ್ಲಕ್ಕೂ ಶ್ರೇಷ್ಠ. ಅದರತ್ತ ಶರರೂಪಮವಾಗಿ ಗುರಿ ಹಿಡಿಯಬೇಕು ಕವಿ. ಇದು ಅತಿ ಕಠೋರ ಮಾರ್ಗ. ಈ ಬಗೆಯ ಕಾವ್ಯಸಾಧನೆಗೆ ಆಯುರ್ದಾಯವನ್ನು ಕವಿಗಳು ಕೇಳಿಕೊಂಡಿದ್ದಾರೆ. 'ಪಶ್ಯನ್, ಶ್ವಸನ್, ಜಿಘ್ರನ್'ಮಾರ್ಗವಾಗಿ, 'ಕನ್ನಡಿಯಾಗಿ' (ತಿಳಿಯಾಗಿ, ಪಾರದರ್ಶಕವಾಗಿ) ಪರಾ ವಾಕ್ ಶಕ್ತಿ ಪ್ರವೇಶ ಆಗಬೇಕು. ಆಗ ಅಲ್ಲಿಯ ಅಂಧಃಕಾರವು ತೊಲಗಿಹೋಗಿ ಶುಭವಾಗುತ್ತದೆ, ಮಂಗಲವಾಗುತ್ತದೆ ಎಂದು ಅಂಬಿಕಾತನಯದತ್ತರ ಶ್ರದ್ಧೆ.

ಸಮಾಜದಲ್ಲಿ ಜ್ಞಾನ ಅಜ್ಞಾನಗಳ ಮೇಲು-ಕೀಳುಗಳ ಜಗಳಗಳಿವೆ. ಹಾಲು ಯಾವುದು, ನೀರು ಯಾವುದು ಎಂಬುದರ ಸರಿಯಾದ ವಿವೇಕ ಆಗುತ್ತಿಲ್ಲ. ದಾಯಾದಿತನ ಬೆಳೆಯುತ್ತಿದೆ, ವಿಶ್ವಬಾಂಧವ್ಯ ಸಾಧ್ಯವಾಗುತ್ತಿಲ್ಲ. ಸ್ಥಿರತೆಗಿಂತ ವ್ಯಭಿಚಾರ ಹೆಚ್ಚಾಗಿದೆ. ಕಾಲಿಗೆ ಕಣ್ಣಿಲ್ಲ. ಕಣ್ಣು ಬರಿ ಕನ್ನಡಿಯಾಗಿವೆ. 'ಭಾರತದ ಭಾರತಿಗೆ ಉತ್ತರವೆ ಇಲ್ಲಾ. ಪ್ರಶ್ನೆ ಎಲ್ಲಾ. ಉದ್ಗಾರ ಸಾಲುಸಾಲೇ ! ಪ್ರಶ್ನೆಗಳೇ ಮಾಲೆ !' ಮೊದಲಾದ ವಿಚಾರಗಳು ಕವಿಯ ಶಾಂತ ಮಾನಸ ಸರೋವರವನ್ನು ಕಲಕಾಡಿವೆ. ಅದರಿಂದ ಕ್ಷೋಭಗೊಂಡ ಕವಿ - 'ಅವರ ಸಂಸ್ಕಾರ, ಅವರವರ

ಆಕಾರ. ಉಳಿದುದೆಲ್ಲ ವಿಕಾರ' ಹಿರೋಶಿಮಾ ಮತ್ತು ಮೋಹೆಂಜದಾರೋ ಸ್ಮಶಾನದ ಹಾದಿ. ಅವು ನಮಗೆ ಬೇಕಾಗಿಲ್ಲ. 'ಮುಂದೆ ನಡಿ, ಮುಂದೆ ನಡಿ' ಎಂದು ಹೇಳಿ ;

''ನಮ್ಮ ದೇವರು ಹೆಚ್ಚು ನಿಮ್ಮ ದೇವರು ಹೆಚ್ಚು
ದೀಪ ಹಚ್ಚುವ ಕೈಯು ಕೊಲೆಗೆ ಬದ್ಧ
ಬುದ್ಧನೇ ನಿಜವಿರಲಿ, ಸಿದ್ಧನೆ ನಿಜವರಲಿ
ಇತಿಹಾಸ ತಿಲಿಯದವ-ಶುದ್ಧ ನಿರ್ಬುದ್ಧ''

ಎಂದು ಎಚ್ಚರಿಸಿದ್ದಾರೆ. ಸಮಾಜದ ಜಾಗೃತಿ ಕವಿಯ ಕಾವ್ಯದ ಒಂದು ಕಾರ್ಯವಲ್ಲವೆ?

'ಯುಗಕ್ಕೆ ಆದಿ ಇಲ್ಲ, ಅಂತ್ಯ ಇಲ್ಲ', ಸಂಧಿ ಸಮಯವೇ ಯುಗಾದಿ', ಯುಗಾದಿ ಒಂದು ಮಧ್ಯಬಿಂದು'. ಇವು ಅಂಬಿಕಾತನಯದತ್ತರ ಕೆಲವು ಉಕ್ತಿಗಳು. ಮಧ್ಯಬಿಂದುವಿನಲ್ಲಿ ಇದ್ದರೆ, ವರ್ತುಲದ ಯಾವುದೇ ಬಿಂದುವಿನಿಂದ ಸಮ ಅಂತರದಲ್ಲಿಯೇ ಇದ್ದಂತೆ ಆಗುತ್ತದೆ, 'ಸಾದಿ' ಮಾರ್ಗ ಸಾಹಿತ್ಯ ಮಾರ್ಗ. ಸಾಹಿತ್ಯ ಮಾರ್ಗವು ಎಲ್ಲರೊಂದಿಗೆ ಸಮಾನ ಭಾವದಿಂದ ಸಹಭಾವದಿಂದ ಬಾಳುವೆ ಮಾಡುವ ಸದ್ಭಾವವನ್ನು ನಮ್ಮಲ್ಲಿ ಸ್ಥಿರಗೊಳಿಸಿಕೊಳ್ಳಲು ಪ್ರಾರಂಭ ಮಾಡುವುದೇ ನಿಜವಾದ ಯುಗಾದಿ-ಎಂದು ಅಂಬಿಕಾತನಯದತ್ತರ ಮತ.

ಆತ್ಮಾ, ಪರಮಾತ್ಮಾ, ಅಂತರಾತ್ಮಾ ಇವರ ಅರಿವು ಆಗಬೇಕಾದರೆ ಸೌಜನ್ಯವೆಂಬ ಹೂ, ಸಾಮರ್ಥ್ಯ ಎಂಬ ಬೆಲಪತ್ರಿ, ಸತ್ಯವೆಂಬ ದೀಪ, ಪ್ರೀತಿ ಎಂಬ ನೈವೇದ್ಯ , ಸೌಂದರ್ಯದ ಧ್ಯಾನ ಮಾಡುತ್ತ ಆನಂದದ ಸಾಮಗ್ಗಾನವನ್ನು ಮಾಡುವುದೇ ಚೈತನ್ಯದ ಪೂಜೆ. ಆಗ ದೇಹಿಯ ಹೃದಯಪುಂಡರೀಕದಲ್ಲಿ ಅಡಗಿರುವ 'ವಿಟ್ಠಲ' ಅರಿವಿನ ಉದ್ಭವವಾಗುತ್ತದೆ, 'ಪಂಚಾರತಿ' ಗೃಹಿಣಿಯ ಗೀತ. ಅವಳಿಗೆ ಅಡಿಗೆ ಮನೆಯೊಳಗಿನ ಅಗ್ನಿಯೇ ದೇವರು. ಅವನು ಅವಳೊಡನೆ, ತವರು ಮನೆಯವರು ಬರುವ ಸುದ್ದಿಯನ್ನು ಭಗ-ಭಗ ಭಾಷೆಯಲ್ಲಿ ಮಾತನಾಡುತ್ತಾನೆ. ಉನ್ಮುಖ ಮಾನವತೆಯ ಶಿಖೋದ್ದೀಪನಕ್ಕೆ ದೇಹವೆಂಬ ಕ್ಷೇತ್ರ ಸಿದ್ಧವಾಗಬೇಕಾದರೆ ಎದೆಯೇ ಕರ್ಮಶಾಲೆ. ಎಲ್ಲವೂ ಅಲ್ಲಿಯೇ ಪಾಕವಾಗಬೇಕು ಎಂಬುದು 'ಎದೆಯ ಒಕ್ಕಲಿಗ'ನ ಬೋಧ. 'ನಮ್ಮ ದೇಶ-ಭೂಪ್ರದೇಶ, ಸಾರ್ವಭೌಮ ಭಾವ. ಇದೋ ಜೀವ ಅದೋ ಆತ್ಮ, ಮರೆತವನೇ ಸಾವ' ಎಂಬಲ್ಲಿ, ಮಾನವನಲ್ಲಿ ವಿಶಾಲ ಮನೋಭಾವ ಮೂಡಬೇಕಾಗಿದೆ ಎಂದು ಅಂಬಿಕಾತನಯದತ್ತರು ಸೂಚಿಸಿದ್ದಾರೆ.

'ಕಣ್ಣರಳು' ಇದೂ ನಿರುಕ್ತದ ಜಾತಿಯ ಕವನವೇ. ಕಲ್ಲು ಅರಳಿದರೆ -ದೇವರು, ಮಣ್ಣು ಅರಳಿದರೆ-ಹತ್ತಿ, ನೀರು ಅರಳಿದರೆ ತಾವರೆ, ದಿಕ್ಕರಳಿದರೆ-ಬೆಳಕು, ಮನ ಅರಳಿದರೆ ಮುಕ್ತಿ, ಜೀವ ಅರಳೋದಽ ಜೀವಾಳಾ. ಬೀಸಿದರ -ಕಾಳು ಅರಳತಾವ, ಕಾಸಿದರ- ಅನ್ನ ಅರಳತದ, ಸುರಿಸಿದರ ಕವಳ ಅರಳತದ, ಹಾಲು ತೊರೆ ಬಿಟ್ಟರ-ಮಗು ಅರಳತದ -ಹೀಗೆ ಕಾರ್ಯ

ಕಾರಣಮಾಲೆಯನ್ನೇ ಅಂಬಿಕಾತನಯದತ್ತರು ಕೊಟ್ಟಿದ್ದಾರೆ. ಅರಳುವಿಕೆ ಸುಖದ, ಶಾಂತಿಯ, ಪಾಕದ, ಚೈತನ್ಯದ ಬೆಳಕಿನ ಸಂಕೇತವಾಗಿ ಇಲ್ಲಿ ಮೂಡಿದೆ. ಕಲ್ಲೂ ದೇವರು=ಪ್ರಕಾಶ, ಅದಕ್ಕೂ ಕಣ್ಣು ಇರತಾವ ಎಂಬ ಸದ್ಭಾವ ನಮ್ಮಲ್ಲಿ ಮೂಡಬೇಕಾಗಿದೆ. ಚಕಮುಕಿ ಕಲ್ಲು ಕಿಡಿ ಹೊರಹೊಮ್ಮಿಸುತ್ತದೆ. ಇದು ಜ್ಞಾನದ ಕಿಡಿ.

'ದೇಮುವ್ವನ ಮೆರವಣಿಗೆ' ಇಂದಿನ ಪ್ರಜಾಪ್ರಭುತ್ವದ ವಿಕೃತರೂಪವನ್ನು ಚಿತ್ರಿಸುತ್ತದೆ. ದೇವ-ದೇಮು-ದೇಹ-ದೇಪ (ದೀಪ) ಎಂಬುದು ವ-ಮ-ಹ-ಪ ಭೇದ ಎಂದು ವ್ಯಾಕರಣ ಹೇಳುತ್ತದೆ. ಇಲ್ಲಿ ಬದಲಾವಣೆ ಹಾನಿಕಾರಕವಲ್ಲ. ಆದರೆ ದೇಹಿಗಳು ದೇವರಾಗದೇ =ದೀಪವಾಗದೆ, ದೇಮು-ದೆವ್ವ ಆಗಿಬಿಟ್ಟರೆ ಹೇಗೆ?- ಎಂಬುವದೇ ಕವಿಯ ಪ್ರಶ್ನೆ.

'ಹಾಡಿದ್ದೆಲ್ಲಾ ಛಂಧ. ಮಾಡಿದ್ದೆ ಪ್ರಬಂಧ
ಕೂಡಿದ್ದೆ ಸಭೆ, ಅಟ್ಟಹಾಸ
ಬುದ್ಧ ಕಲ್ಕಿಯ ಕೂಡ ಕೃತಕೃತ್ಯರಾದರು
ಕೃತಯುಗಕ್ಕಾಯ್ತು ಸಂನ್ಯಾಸ'

ಎನ್ನುವಲ್ಲಿ ಕೃತಯುಗದ ಆಗಮನಕ್ಕೆ ನವಮಾನವರೇ ಬೇಕು ಎಂದು ಕವಿಗಳು ಸೂಚಿಸಿದ್ದಾರೆ.

'ಕೇಳಿನುಡಿ- ನುಡಿಯಕೇಳಿ' ಇದೂ ಮತ್ತೆ ಶ್ರುತಿ-ಕೃತಿ ಸಂಬಂಧದ ಕವನವೆ ಆಗಿದೆ. ಅಂತರಾತ್ಮನ ನುಡಿಯನ್ನು ಕೇಳಿ ಅದರಂತೆ ನಡೆಯುವುದು ಯುಕ್ತ. ತಪ್ಪು ಕೇಳಿದರೆ, ದೃಷ್ಟಿಯಲ್ಲಿ ದೋಷಬರುತ್ತದೆ. ಶ್ರವಣ ಮತ್ತು ದೃಷ್ಟಿ ಎರಡೂ ತಪ್ಪಾದರೆ ನಡತೆ ಸರಿಯಾಗುವುದು ಅಸಾಧ್ಯ ಎಂಬ ವಿಚಾರವು ಈ ಕವನದಲ್ಲಿ ಮಾರ್ಮಿಕವಾಗಿ ಅಭಿವ್ಯಕ್ತಗೊಂಡಿದೆ.

'ಪಡುವ ಹೊತ್ತು ಹೋತು, ಹೂತ-ದೇವಧ್ವನಿ ಹಾಡಲಿ
ಸಾರ್ವಭೌಮ ಮಾನವತೆಯ ಚಂದ್ರಸೂರ್ಯ ನೋಡಲಿ'

ಎಂಬಲ್ಲಿ ಕವಿ ಆಶಾವಾದಿಯಾಗಿದ್ದಾನೆ.

ಕೊನೆಯ ಕವನ 'ಶಿಶುಮಾರನ ಲಾಲಿ,' ದಶಾವತಾರ ಹಾವಳಿ ಸಾಕು, ದೇವತಾತ್ಮನ ಹೃದಯದ ಮಧು ಉದಯವಾಗಲಿ, ಪುರುಷೋತ್ತಮನ ಅವತಾರವಾಗಲಿ-ಎಂದು ಹಾರೈಸಿ ಕವಿಗಳು, ''ಐಕ್ಯೈಕ ಹೃದಯಾ, ಆಗಲಿ ಉದಯಾ, ಓಂ ಸ್ವಸ್ತಿ ಸ್ವಸ್ತಿ ಸ್ವಸ್ತೀ ಭೂಮಂಡಲ ಸ್ವಾಸ್ಥ್ಯ'' ವನ್ನು ದಯಪಾಲಿಸು ಎಂದು ಪ್ರಾರ್ಥಿಸಿ ಪರಮಾತ್ಮನಿಗೆ ಆರತಿಯನ್ನೆತ್ತಿದ್ದಾರೆ. ದೇವಜನ್ಮದ ಸ್ವಾಗತಗೀತದೊಂದಿಗೆ ಕವನಸಂಗ್ರಹವನ್ನು ಮುಗಿಸಿದ್ದಾರೆ-ಅಂಬಿಕಾತನಯದತ್ತರು.

ದೇಹ ಧರಿಸಿ ಇರುವಿಕೆ ಎಂಬುದೇ ಜೀವನ. ಈ ಜೀವನದಲ್ಲಿ ಪರಸ್ಪರ ಪ್ರೇಮದಿಂದ-ಶಾಂತಿ

ಮತ್ತು ಪರಸ್ಪರ ದ್ವೇಷದಿಂದ-ಯುದ್ಧ ಆಗುತ್ತಲೇ ಬಂದಿವೆ. ಪ್ರೇಮದಿಂದ ಕೂಡಿದ ಜೀವನವು, ಮನೆಯ ಬೆಳಕಾಗುತ್ತದೆ. ಜೀವನ, ಪ್ರೇಮ ಮತ್ತು ಬೆಳಕು ಇವುಗಳ ಕೇಂದ್ರಸ್ಥ ಶಕ್ತಿಯೇ-ಶಾಂತಿ ಎಂದು ಅಂಬಿಕಾತನಯದತ್ತರ ದರ್ಶನ. ಶಾಂತಿ ಕೇಂದ್ರಸ್ಥವಾದಾಗ ಜೀವನ, ಬೆಳಕು ಮತ್ತು ಗುಣಗಳ ನಿಜವಾದ ಅರ್ಥವಾದೀತು. ಶಾಂತಿಯೇ ಸಂಚಾರಿಬಿಂದುವಾದರೆ ಪ್ರೇಮ, ಬೆಳಕು ಮತ್ತು ಜೀವನ ನೀರಸವಾಗುತ್ತದೆ ಎಂಬ ದರ್ಶನದಿಂದಲೇ ಅಂಬಿಕಾತನಯದತ್ತರು "ಶಾಂತಿರಸವೇ ಪ್ರೀತಿಯಿಂದ ಮೈದೋರಿತಣ್ಣಾ, ಇದು ಬರಿ ಬೆಳಗಲ್ಲೋ ಅಣ್ಣಾ" ಎಂದು 'ಗರಿ'ಯಲ್ಲಿ ಹಾಡಿದ್ದು. ಆ ದರ್ಶನ ಶುದ್ಧಿಯಿಂದ ಶ್ರುತಿ ಹಿಡಿದು ರಚಿಸಿದ ಕೃತಿ 'ನಾಕು ತಂತಿ', 'ನಗೀ ನವಿಲಾಡುತಿತ್ತು', 'ಬಾ ಕೈಯ ತಾ', 'ಹುಬ್ಬಳ್ಳಿಯಾಂವಾ', 'ಸಖೀಗೀತ' ಮೊದಲಾದ ಪ್ರಣಯಗೀತಗಳ ಜಾತಿಯ ಕವನಗಳು 'ನಾಕು ತಂತಿ'ಯಲ್ಲಿ ಇಲ್ಲ ಎಂಬುದು ನಿಜ. ಅದಕ್ಕೆ ಒಂದು ಕಾರಣವಿದೆ. ಈ ಕವನಗಳ ರಚನೆಯ ಕಾಲಕ್ಕೆ ಬೇಂದ್ರೆಯವರ 'ಕಾಮಽ ಈಶಾರ್ಪಿತವಾಗಿದೆ' ಎಂದು ತೋರುತ್ತದೆ.

ಸಾಮಗಾನ ಛಂದದ-ಮತ್ತೆ ಶ್ರಾವಣಾ, ಮತ್ತೆ ಶ್ರಾವಣಾ ಬಂದಾ, ಕಾಮಽ ಈಶಾರ್ಪಿತವಾದವರೆಲ್ಲಾ, ಪರಾಶಽರರೂಪಾಽ, -ಶ್ರೀ ವಿವೇಕಾನಂದ ಶಿಖರ ಪ್ರಗಾಥಾ ಛಂದೋಬದ್ಧ-ಸುನೀತಗಳು; ಜಾನಪದದ ಗತ್ತಿನಲ್ಲಿ- ಚೈತನ್ಯದ ಪೂಜೆ, ಪಂಚಾರತಿ, ಎದೆಯ ಒಕ್ಕಲಿಗನ ಹಾಡು, ಕಣ್ಣರಳು, ದೇಮವ್ವನ ಮೆರವಣಿಗೆ - ಪದದ ಧಾಟಿಯಲ್ಲಿ, ಅಹಂಕಾರದ ಬಿಡುಗಡೆಗಾಗಿ ಮತ್ತು ಮುಕ್ತಛಂದದಲ್ಲಿ ಬರೆದ ಅನೇಕ ಕವನಗಳು-'ನಾಕು ತಂತಿ'ಯಲ್ಲಿ ಸಂಗ್ರಹಿತಗೊಂಡಿವೆ. ಛಂದೊವೈವಿಧ್ಯ ಈ ಕವನಸಂಗ್ರಹದ ಒಂದು ವೈಶಿಷ್ಟ್ಯ ಎಂದು ಹೇಳಬಹುದು.

೧೩, ಶ್ರೀಮಾತಾ ಸಾಧನಕೇರಿ,
ಧಾರವಾಡ
೨೪-೧೧-೧೯೯೭

ವಾಮನ ಬೇಂದ್ರೆ,
ಸಂಚಾಲಕರು,
ಅಂಬಿಕಾತನಯದತ್ತ ವೇದಿಕೆ

# ಪ್ರಕಾಶಕರ ನುಡಿ
## (ಹತ್ತನೇ ಆವೃತ್ತಿಗೆ)

''ನಾಕುತಂತಿ'' ಕವನ ಸಂಗ್ರಹವು ವರಕವಿ ಡಾ|| ದ. ರಾ. ಬೇಂದ್ರೆಯವರಿಗೆ ರಾಷ್ಟ್ರದ ಅತ್ಯುಚ್ಚ ಸಾಹಿತ್ಯ ಪ್ರಶಸ್ತಿಯಾದ ಜ್ಞಾನಪೀಠ ಪ್ರಶಸ್ತಿಯನ್ನು ದೊರಕಿಸಿದ ವಿಶಿಷ್ಟ ಕೃತಿ. ಇದನ್ನು ಬೇಂದ್ರೆಯವರು ಯೋಗಸಾಧನೆಯನ್ನು ಪ್ರತಿಬಿಂಬಿಸುವ ಕೃತಿ ಎಂದು ಕರೆದಿರುವುದು ಗಮನಾರ್ಹ. ೧೯೬೪ರಲ್ಲಿ ಪ್ರಪ್ರಥಮವಾಗಿ ಪ್ರಕಟವಾದ ಈ ಕೃತಿಗೆ ೧೯೭೪ರಲ್ಲಿ ಜ್ಞಾನಪೀಠ ಪ್ರಶಸ್ತಿ ಪ್ರಾಪ್ತವಾಯಿತು. ಈಗ ಈ ಮಾತಿಗೆ ಮೂರು ದಶಕಗಳಾದವೆ, ಈ ಕೃತಿಯ ಪ್ರಥಮ ಪ್ರಕಟಣೆಯ ನಾಲ್ಕನೆಯ ದಶಕ ಇದು. ಈ ನಾಲ್ಕು ದಶಕಗಳಲ್ಲಿ ಈ ಕೃತಿಯು ತನ್ನ ಒಂಭತ್ತು ಆವೃತ್ತಿಗಳನ್ನು ಮುಗಿಸಿ ಈಗ ೧೦ನೆಯ ಆವೃತ್ತಿಯಾಗಿ ಪ್ರಕಟವಾಗುತ್ತಿರುವುದು ಇದರ ಜನಪ್ರಿಯತೆಯ ಸಂಕೇತವಾಗಿದೆ. ಕನ್ನಡ ರಸಿಕವೃಂದವು ಯುಗಪ್ರವರ್ತಕ, ಭಾವ ಋಷಿ, ವಿಶ್ವ ಕವಿ ಅಂಬಿಕಾತನಯದತ್ತರ (ವರಕವಿ ಡಾ|| ದ. ರಾ. ಬೇಂದ್ರೆ) ಕಾವ್ಯಕ್ಕೆ ನೀಡುತ್ತಿರುವ ಮಹತ್ವ ಹಾಗೂ ಗೌರವ ಅಭಿನಂದನಾರ್ಹ. ಈ ಕನ್ನಡ ಕುಲಕೋಟಿಗೆ ಕೃತಜ್ಞಪೂರ್ವಕ ಅಭಿನಂದನೆಗಳನ್ನು ಸಲ್ಲಿಸುವುದು ನಮ್ಮ ಕರ್ತವ್ಯ ಎಂದು ನಾನು ಭಾವಿಸಿದ್ದೇವೆ. ಇತ್ತೀಚೆ ಹುಬ್ಬಳ್ಳಿಯಲ್ಲಿರುವ ಅಂಧರ ಶಾಲೆಯ ಮಕ್ಕಳು ಹುಬ್ಬಳ್ಳಿಯಲ್ಲಿ ಬೇಂದ್ರೆ ಶತಮಾನೋತ್ಸವ ಸ್ಮರಣೆಗಾಗಿ ಕರ್ನಾಟಕ ರಾಜ್ಯ ಸರಕಾರಿ ದಿನಗೂಲಿ ನೌಕರರ ಮಹಾಮಂಡಲವು ನಿರ್ಮಿಸಿರುವ ''ಬೇಂದ್ರೆ ಕುಟೀರ'' ಕ್ಕೆ ಭೇಟಿ ನೀಡಿದ್ದರು. ಅವರು ಬೇಂದ್ರೆಯವರ ಕವನಗಳನ್ನು ಹಾಡಿದ ರೀತಿ, ಬೇಂದ್ರೆಯವರ ಸಂದೇಶವನ್ನು ತಿಳಿಯಲು ತೋರಿದ ಆಸಕ್ತಿ, ಅವರು ಜೀವನದಲ್ಲಿ ಅನುಭವಿಸಿದ ನೋವು-ನಲಿವುಗಳ ಬಗ್ಗೆ ಕೇಳಿದ ಪ್ರಶ್ನೆಗಳು ನನ್ನನ್ನು ಚಕಿತಗೊಳಿಸಿತು. ಅವರು ಬ್ರೇಲ್ ಲಿಪಿಯಲ್ಲಿ ಪ್ರಕಟವಾಗಿರುವ ಬೇಂದ್ರೆ ಕವನ ಸಂಕಲನವನ್ನು ಆಧರಿಸಿ ಬೇಂದ್ರೆ ಕವನಗಳನ್ನು ಹಾಡಲು

ಕಲಿತಿದ್ದರು. ರೇಡಿಯೋದಲ್ಲಿ ಆಗಾಗ ಪ್ರಸಾರವಾಗುವ ಕವನಗಳನ್ನು ಕ್ಯಾಸೆಟ್‌ಗಳನ್ನು ಕೇಳಿ ಅವರ ಕವನಗಳನ್ನು ಹಾಡಲು ಕಲಿತಿದ್ದರು. ಈ ಘಟನೆಯು ಬೇಂದ್ರೆಯವರ ಕವನಗಳ ಪ್ರಸ್ತುತತೆ, ಔಚಿತ್ಯ ಹಾಗೂ ಜನಪ್ರಿಯತೆಗೆ ಒಂದು ಸಾಕ್ಷಿಯಾಗಿದೆ. ಇದು ಒಂದು ಉದಾಹರಣೆ ಮಾತ್ರ. ಬೇಂದ್ರೆಯವರು ತಮ್ಮ ಕವನಗಳ ಮೂಲಕ ಹಾಗೂ ವಿವಿಧ ನಾಟಕಗಳು, ಪ್ರಬಂಧಗಳು ಹಾಗೂ ವೈಜ್ಞಾನಿಕ ಸಂಶೋಧನೆಗಳ ಮೂಲಕ ನೀಡಿದ ಸಂದೇಶವು ಇನ್ನೂ ಹೆಚ್ಚು ಹೆಚ್ಚು ಪ್ರಚಾರಗೊಂಡು, ಅವರ ನವಮಾನವ ಆವಿರ್ಭಾವದ ಕನಸು ನನಸಾಗಬೇಕೆಂಬುದೇ ನಮ್ಮ ಆಶಯ.

ಹುಬ್ಬಳ್ಳಿಯಲ್ಲಿ ಸ್ಥಾಪಿತಗೊಂಡಿರುವ ವರಕವಿ ಡಾ|| ದ. ರಾ. ಬೇಂದ್ರೆ ಸಂಶೋಧನೆ ಸಂಸ್ಥೆ ಹಾಗೂ ಬೇಂದ್ರೆ ಸಂಗೀತ ಅಕ್ಯಾಡೆಮಿ ಇವು ಬೇಂದ್ರೆ ಸಾಹಿತ್ಯ ಪ್ರಕಟಣೆ ಸಂಶೋಧನೆ ಹಾಗೂ ಪ್ರಸಾರದ ಕಾರ್ಯವನ್ನು ಕೈಗೊಂಡಿದೆ. ನಾಲ್ಕು ವರುಷಗಳ ಹಿಂದೆ ಹುಬ್ಬಳ್ಳಿ ಗೋಕುಲ ರಸ್ತೆಯಲ್ಲಿರುವ ಬಸವೇಶ್ವರ ನಗರದ ವಿಶ್ವಶ್ರಮ ಚೇತನ ಆವರಣದಲ್ಲಿ ಸ್ಥಾಪಿಸಲ್ಪಟ್ಟ ಈ ಸಂಸ್ಥೆಗಳು ಬಹಳ ಮಹತ್ವದ ಕಾರ್ಯಗಳನ್ನು ಮಾಡುತ್ತಿರುವುದು ಗಮನಾರ್ಹ. ಕಳೆದ ವರ್ಷ (ಬೇಂದ್ರೆಯವರ ೧೦೮ನೆಯ ಹುಟ್ಟು ಹಬ್ಬದ ಸಂದರ್ಭದಲ್ಲಿ) ಬೇಂದ್ರೆಯವರ ಸಮಗ್ರ ಕಾವ್ಯವನ್ನು ಆರು ಸಂಪುಟದಲ್ಲಿ (ಒಟ್ಟು ೩೦೬೩ ಪುಟ, ೧೪೨೭ ಕವನಗಳು) ವರಕವಿ ಡಾ|| ದ. ರಾ. ಬೇಂದ್ರೆ ಜೀವನ ಮಹಾಕಾವ್ಯ ''ಔದುಂಬರಗಾಥೆ''ಯಾಗಿ ಪ್ರಕಟಪಡಿಸಿದ್ದೇವೆ. ದ. ರಾ. ಬೇಂದ್ರೆಯವರ ಚಿರಂಜೀವಿಗಳು, ಕನ್ನಡ ಸಾಹಿತ್ಯ ಸಂಶೋಧನೆಯ ಕ್ಷೇತ್ರದಲ್ಲಿ ಮಹತ್ವದ ಕಾರ್ಯಗಳನ್ನು ಮಾಡುತ್ತಿರುವ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ವಿಜೇತರೂ ಹಾಗೂ ಬೇಂದ್ರೆ ಸಂಶೋಧನ ಸಂಸ್ಥೆಯ ಸಹ ನಿರ್ದೇಶಕರೂ ಆದ ಡಾ|| ವಾಮನ ಬೇಂದ್ರೆಯವರ ಸಂಪಾದಕತ್ವದಲ್ಲಿ ನಾವೀನ್ಯಪೂರ್ಣವಾಗಿ ಸಮಗ್ರ ಕಾವ್ಯ ಸಿದ್ಧವಾದದ್ದು ಸಾಹಿತ್ಯ ಇತಿಹಾಸದಲ್ಲಿ ಒಂದು ಮಹತ್ವದ ಮೈಲುಗಲ್ಲು ಎಂದೇ ಹೇಳಬೇಕು. ಏಕೆಂದರೆ ಈ ಸಮಗ್ರ ಕಾವ್ಯದ ಸಂಪಾದನೆಯಲ್ಲಿ ಬಳಸಿರುವ ವಿಧಾನ ಪರಂಪಾರಾನುಗತವಾಗಿ ಬಂದಿರುವ ಕವನ ರಚನೆಯ ಕಾಲವನ್ನು ಆಧರಿಸಿ ಕಾಲಕ್ರಮೇಣ ಅವುಗಳನ್ನು ಹೊಂದಿಸಿ, ಈ ಸಂಪುಟಕ್ಕೆ ಒಂದು ಸಂಪಾದಕರ ಮಾತನ್ನು ಸೇರ್ಪಡೆಮಾಡಿ ಪ್ರಕಟಿಸಿದರೆ ಈ ಕಾರ್ಯ ಮುಗಿಯಿತು ಎಂಬ ವಿಧಾನವಲ್ಲ, ಇದು ವಿನೂತನವಾದದ್ದು. ಡಾ|| ವಾಮನ ಬೇಂದ್ರೆಯವರು ವರಕವಿಗಳ ಅಭಿಮತದಂತೆ, ಅಂದರೆ ತಮ್ಮ ಜೀವನವೇ ಒಂದು ಮಹಾಕಾವ್ಯ, ಅದು ಔದುಂಬರಗಾಥೆ, ಎಂಬ ಸೂತ್ರವನ್ನು ಹಿಡಿದು, ಬೇಂದ್ರೆಯವರ ಸಮಗ್ರ ಕಾವ್ಯವನ್ನು ಜೀವನ ಮಹಾಕಾವ್ಯದ ಚೌಕಟ್ಟಿನಲ್ಲಿ, ಮಹಾಕಾವ್ಯ ರಚನಾಕ್ರಮ ಮತ್ತು ಮಹಾಕಾವ್ಯ ವಿಧಾನದಲ್ಲಿ ರೂಪಿಸಿ, ಪ್ರತಿ ಕವನದಲ್ಲಿಯ ಕಠಿಣ ಅಥವಾ ಮಹತ್ವದ ಶಬ್ದಗಳಿಗೆ ಅರ್ಥವನ್ನು, ಕವನಗಳ ಭಾವ ಸಂದರ್ಭಗಳನ್ನು, ಅವಶ್ಯವಿದ್ದಲ್ಲಿ ವಿಶೇಷ ಟಿಪ್ಪಣಿಗಳನ್ನು ಸೇರ್ಪಡೆಮಾಡಿ ಸಂಪಾದಿಸಿದ್ದಾರೆ. ಇದಲ್ಲದೆ ಆರು ಸಂಪುಟಗಳಾದ

(೧) ಸಮನ ಸಂಪುಟ

(೨) ದರ್ಶನ ಸಂಪುಟ

(೩) ವಿಕಾಸ ಸಂಪುಟ

(೪) ವಿನ್ಯಾಸ ಸಂಪುಟ

(೫) ತತ್ತ್ವ ಸಂಪುಟ

(೬) ಸಿದ್ಧಾಂತ ಸಂಪುಟ

ಇವುಗಳಿಗೆ ಒಂದೊಂದಕ್ಕೂ ವಿಸ್ತೃತವಾದ ಸಂಪಾದಕರ ಮಾತುಗಳನ್ನು ರಚಿಸಿದ್ದಾರೆ. ಒಂದು ದೃಷ್ಟಿಯಲ್ಲಿ ಬೇಂದ್ರೆ ಸಮಗ್ರ ಕಾವ್ಯ ಸಂಪಾದನೆಯನ್ನು ಅತ್ಯಂತ ವಿನೂತನ ರೀತಿಯಲ್ಲಿ ವಿಶಿಷ್ಟ ವಿಧಾನದಲ್ಲಿ ವರಕವಿ ದ. ರಾ. ಬೇಂದ್ರೆಯವರ ಪರಿಕಲ್ಪನೆಗೆ ಅನುಗುಣವಾಗಿ ಸಂಪಾದಿಸಿ ಸಾಹಿತ್ಯ ಕ್ಷೇತ್ರಕ್ಕೆ ಒಂದು ಮಹಾನ್ ಕೊಡುಗೆಯನ್ನು ಡಾ॥ ವಾಮನ ಬೇಂದ್ರೆಯವರು ಕೊಟ್ಟಿದ್ದಾರೆ ಎಂದೇ ಹೇಳಬೇಕು. ಇದರ ಪ್ರಕಟಣೆಯ ಜವಾಬ್ದಾರಿಯನ್ನು ವರಕವಿ ಡಾ॥ ದ. ರಾ. ಬೇಂದ್ರೆ ಸಂಶೋಧನ ಸಂಸ್ಥೆ ವಹಿಸಿಕೊಂಡು ಯಾವುದೇ ಬಾಹ್ಯ ಸಹಾಯವನ್ನು ಪಡೆಯದೇ ತನ್ನವೇ ಆಂತರಿಕ ಸಂಪನ್ಮೂಲಗಳ ಕ್ರೋಢೀಕರಣದಿಂದ ಪ್ರಕಟಿಸಿರುವುದು ಒಂದು ಔಚಿತ್ಯಪೂರ್ಣ ಸಾಧನೆ ಎಂದೇ ಹೇಳಬೇಕು. ಈ ಕೃತಿಗಳ ಹೊಸ ವಿನ್ಯಾಸದ ದೃಷ್ಟಿಯಿಂದಲೇ ಕವನಗಳ ಅಂತಃ ದರ್ಶನವನ್ನು ಪಡೆದು ಮಹತ್ವದ ರೇಖಾಚಿತ್ರಗಳನ್ನು ಸುಪ್ರಸಿದ್ಧ ಕಲಾವಿದ ಹಾಗೂ ಗಾರುಡಿಗ ಬೇಂದ್ರೆಯವರ ಗರಡಿಯಲ್ಲಿ ಪಳಗಿದ ಶ್ರೀ ಸುರೇಶ ಕುಲಕರ್ಣಿ ರಚಿಸಿರುವದನ್ನು ಸೇರ್ಪಡೆ ಮಾಡಿದ್ದೇವೆ. ಪ್ರಕಟಣೆ ಕ್ಷೇತ್ರದಲ್ಲಿ ಇದೊಂದು ವಿನೂತನ ದಾಖಲು ಎಂದೇ ಹೇಳಬೇಕು. ಇಷ್ಟೆಲ್ಲಾ ನಾವೀನ್ಯತೆಗಳನ್ನು ಅರ್ಥವತ್ತತೆಯನ್ನು ಹೊಂದಿರುವ ಈ ಸಮಗ್ರ ಕಾವ್ಯದ ಆರೂ ಸಂಪುಟಗಳನ್ನು ಪ್ರತಿಯೊಬ್ಬ ಕನ್ನಡಿಗ ತನ್ನ ವೈಯಕ್ತಿಕ ಗ್ರಂಥ ಭಂಡಾರದಲ್ಲಿ ಹೊಂದಿರಬೇಕು. ಅಷ್ಟೇ ಅಲ್ಲದೆ ರಾಜ್ಯದ ಗ್ರಂಥಾಲಯಗಳಲ್ಲಿ, ಶಾಲಾ-ಕಾಲೇಜುಗಳ ಗ್ರಂಥಾಲಯಗಳಲ್ಲಿ ಸಂಗ್ರಹಿತವಾಗಲೇಬೇಕು ಎಂಬುದು ಬೇಂದ್ರೆ ಸಂಶೋಧನೆ ಸಂಸ್ಥೆಯ ಅಭಿಲಾಷೆಯಾಗಿದೆ. ''ಜಗದೇಳಿಗೆ ಯಾಗುವದಿದೆ ಕರ್ನಾಟಕ ದಿಂದೇ'' ಎಂಬ ಭವಿಷ್ಯ ನುಡಿದ ಈ ವರಕವಿಗೆ ನಾವು ಸಲ್ಲಿಸಬೇಕಾದ ಗೌರವ ಇದಾಗುತ್ತದೆ. ಬೇಂದ್ರೆ ಸಂಶೋಧನೆ ಸಂಸ್ಥೆಯು ದ. ರಾ. ಬೇಂದ್ರೆಯವರ ನಾಟಕಗಳು, ಪ್ರಬಂಧ, ವೈಜ್ಞಾನಿಕ ಸಂಶೋಧನೆ ಮುಂತಾದ ಎಲ್ಲ ಪ್ರಕಾರದ ರಚನೆಗಳನ್ನು ಒಟ್ಟು ೨೫ ಸಂಪುಟಗಳಲ್ಲಿ ಪ್ರಕಟಿಸುವ ಬೃಹತ್ ಯೋಜನೆಯನ್ನು ಹಮ್ಮಿಕೊಂಡಿದೆ. ಈಗ ಪ್ರಕಟವಾಗಿರುವ ಆರು ಸಂಪುಟಗಳ ಸಮಗ್ರ ಕಾವ್ಯವನ್ನು ಹೊರತುಪಡಿಸಿ, ಇನ್ನೂ ೧೯ ಸಂಪುಟಗಳು ಪ್ರಕಟವಾಗಬೇಕಾಗಿದೆ. ಈ ಬೃಹತ್ ಕಾರ್ಯದಲ್ಲಿ ಬೇಂದ್ರೆ ಸಂಶೋಧನೆ ಸಂಸ್ಥೆಯು ತೊಡಗಿದೆ ಎಂದು ತಿಳಿಸಲು ಸಂತಸವಾಗುತ್ತದೆ.

ಬೇಂದ್ರೆ ಸಂಗೀತ ಅಕ್ಯಾಡೆಮಿ ಇನ್ನೊಂದು ಮಹತ್ವಪೂರ್ಣ ಸಂಸ್ಥೆ ಇದರ ಕಾರ್ಯಕ್ಷೇತ್ರ ವಿಭಿನ್ನವಾದರೂ ವಿಶಿಷ್ಟ. ವರಕವಿ ಡಾ॥ ದ. ರಾ. ಬೇಂದ್ರೆಯವರು ತಮ್ಮ ಕವನಗಳನ್ನು ಹೆಚ್ಚು

ಹೆಚ್ಚಾಗಿ ಜನ ಹಾಡಬೇಕು ಎಂದು ಬಯಸಿದರು. ಬಹಳ ಹಿಂದೆ ತಾವೇ ಹಾಡಿದ ಕೆಲವು ಕವನಗಳನ್ನು ಸುಪ್ರಸಿದ್ಧ ಹೆಚ್.ಎಂ.ವಿ. ಸಂಸ್ಥೆಯು ಗಾನದೋಸೆಯಾಗಿ ಬಿಡುಗಡೆ ಮಾಡಿತ್ತು. ಇದೊಂದು ಅಪೂರ್ವ ಗಾನದೋಸೆ ಎಂದೇ ಹೇಳಬೇಕಾಗಿದೆ. ಇದಲ್ಲದೆ ಬೇಂದ್ರೆಯವರು ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತಕ್ಕೆ ಕನ್ನಡದ ಚೀಜುಗಳನ್ನು ರಚಿಸಿದ್ದರು. ಕನ್ನಡದ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತಗಾರರು ಕನ್ನಡ ಚೀಜನ್ನೇ ಬಳಸಬೇಕೆಂಬುದು ಅವರ ಹೆಬ್ಬಯಕೆಯಾಗಿತ್ತು. ಅಂತೆಯೇ ಬೇಂದ್ರೆ ಸಂಗೀತ ಅಕ್ಯಾಡೆಮಿಯು ವಿಶೇಷ ಯೋಜನೆಯನ್ನು ಹಾಕಿಕೊಂಡು, ವಿಶಿಷ್ಟ ಕಾರ್ಯದಲ್ಲಿ ತೊಡಗಿದೆ. ಮೊಟ್ಟಮೊದಲನೆಯದಾಗಿ ಪ್ರತಿವರುಷ ದ. ರಾ. ಬೇಂದ್ರೆಯವರ ಜನ್ಮದಿನದ ಮುನ್ನಾದಿನವಾದ ಭಾರತ ಹುಣ್ಣಿಮೆಯಂದು ''ಬೇಂದ್ರೆ ಸಂಗೀತ ರಾತ್ರಿ''ಯನ್ನು ನಡೆಸುತ್ತಿದೆ. ಈ ಸಂದರ್ಭದಲ್ಲಿ ಬೇಂದ್ರೆಯವರ ಕವನಗಳಿಗೆ ಹಿಂದೂಸ್ತಾನಿ ಶಾಸ್ತ್ರೀಯ ಸಂಯೋಜನೆಯನ್ನು ಅಳವಡಿಸಿ, ಕೃತಿಗಳನ್ನು ಪ್ರಕಟಿಸುವ ವಿನೂತನ ಕಾರ್ಯದಲ್ಲಿ ತೊಡಗಿದ್ದೇವೆ. ಈ ಮಾಲಿಕೆಯಲ್ಲಿ ''ಅಂಬಿಕಾತನಯನಽ ಹಾಡಽ ಬೆಳದಿಂಗಳಾ ನೋಡಽ'', ''ನೋಡ್ಯಾನಽ ದಶಾವತರ ಅಂಬಿಕಾತನಯ ಹಾಡ್ಯಾನಽ'', ''ಅಂಬಿಕಾತನಯದತ್ತ ಕಂಡ ಬೆನಕ'' ಹಾಗೂ ''ಅಂಬಿಕಾತನಯದತ್ತ ಬೇಂದ್ರೆ ಕಂಡ ಶ್ರಾವಣ'' ಎಂಬ ನಾಲ್ಕು ಕೃತಿಗಳನ್ನು ಈಗಾಗಲೇ ಪ್ರಕಟಿಸಿದೆ. ಈ ವರುಷದ ಭಾರತ ಹುಣ್ಣಿಮೆ ದಿ॥ ೬-೨-೨೦೦೪ ರಂದು ''ಬೇಂದ್ರೆ ಋತು ದರ್ಶನ'' ಕೃತಿಯನ್ನು ಪ್ರಕಟಿಸುವ ಯೋಜನೆಯನ್ನು ಹಮ್ಮಿಕೊಂಡಿದ್ದೇವೆ. ''ಬೇಂದ್ರೆ ಸಂಗೀತ''ವನ್ನು ಜನಪ್ರಿಯ ಗೊಳಿಸುವ ಕಾರ್ಯವಿಧಾನ ಇದಾಗಿದೆ. ಈ ಯೋಜನೆಯನ್ನು ಕಾರ್ಯರೂಪಕ್ಕೆ ತರುವಲ್ಲಿ ಸಂಗೀತ ವಿದ್ವಾಂಸರಾದ ಪಂಡಿತ ಕೃಷ್ಣಾಜಿ ಕುರ್ತುಕೋಟಿಯವರ ಪಾತ್ರ ಮಹತ್ವದ್ದು. ಬೇಂದ್ರೆ ಕವನಗಳಿಗೆ ಶಾಸ್ತ್ರೀಯ ಸಂಯೋಜನೆಯನ್ನು ಸಿದ್ಧಪಡಿಸುವ ಮಹತ್ವದ ಕಾಣಿಕೆ ಇವರದಾಗಿದೆ.

ಈ ಸಂದರ್ಭದಲ್ಲಿ ಇನ್ನೊಂದು ಮಹತ್ವದ ವಿಷಯವನ್ನು ತಿಳಿಸುವುದು ಅವಶ್ಯ. ಅದೆಂದರೆ ಹುಬ್ಬಳ್ಳಿಯ 'ವಿಶ್ವಶ್ರಮಚೇತನ' ಆವರಣದಲ್ಲಿ ನಿರ್ಮಾಣಗೊಂಡಿರುವ ''ಬೇಂದ್ರೆ ಕಂಡ ಬೆನಕ'' ವಿದ್ಯಾವಿನಾಯಕ ಮಂದಿರ. ಈ ಮಂದಿರದ ವೈಶಿಷ್ಟ್ಯವೆಂದರೆ ಬೇಂದ್ರೆಯವರು ಬೆನಕನನ್ನು ಕುರಿತು ರಚಿಸಿರುವ ೧೪ ಕವನಗಳನ್ನು ಮೈಯಾಗಿ, ಆವರಣವಾಗಿ ಪಡೆದು ಈ ಮಂದಿರ ನಿರ್ಮಾಣವಾಗಿರುವುದು. ಅಂದರೆ ಕಪ್ಪು ಕಲ್ಲಿನಲ್ಲಿ ಈ ಎಲ್ಲ ಕವನಗಳನ್ನು ಗಣಕಯಂತ್ರದ ಸಹಾಯದಿಂದ ಸುಂದರವಾಗಿ ಕೆತ್ತಿಸಿ ಅವುಗಳನ್ನು ಮಂದಿರದ ಸುತ್ತೆಲ್ಲ ನಿಲ್ಲಿಸಲಾಗಿದೆ. ಇದು ವರಕವಿಗೆ ಸಲ್ಲಿಸಿದ ವಿನೂತನ ಹಾಗೂ ಅಪೂರ್ವ ಗೌರವವಾಗಿದೆ.

ಬೇಂದ್ರೆ ಸಂಶೋಧನ ಸಂಸ್ಥೆ ಹಾಗೂ ಸಂಗೀತ ಅಕ್ಯಾಡೆಯಿಯ ಈ ಎಲ್ಲ ಯೋಜನೆಗಳಿಗೆ ಕನ್ನಡ ಕುಲಕೋಟಿಯ ಬೆಂಬಲ-ಪ್ರೋತ್ಸಾಹ-ಸಹಕಾರದ ಅವಶ್ಯಕತೆ ಇದೆ. ಇದುವೇ ನಮ್ಮ ಅಪೇಕ್ಷೆ.

''ನಾಕುತಂತಿ'' ಕೃತಿಯನ್ನು ಸಿದ್ಧಪಡಿಸುವಲ್ಲಿ ಪ್ರಮುಖ ಪಾತ್ರ ವಹಿಸಿದವರು ಡಾ॥ ವಾಮನ ಬೇಂದ್ರೆಯವರು. ಕವನಗಳ ಆಶಯಕ್ಕೆ ತಕ್ಕಂತೆ ಚಿತ್ರ ರಚಿಸುವ ಗುರುತರ ಜವಾಬ್ದಾರಿ ಹೊತ್ತವರು ಖ್ಯಾತ ಕಲಾವಿದ ಶ್ರೀ ಸುರೇಶ ಕುಲಕರ್ಣಿಯವರು. ಈ ಕೃತಿಯ ಡಿ.ಟಿ.ಪಿ. ನಿರ್ವಹಿಸಿದವರು ಡಾ॥ ಕೆ. ಎಸ್. ಶರ್ಮಾ ಕೈ. ತ. ಕೇಂದ್ರದ ಡಿ.ಟಿ.ಪಿ. ವಿಭಾಗದ ಮುಖ್ಯಸ್ಥ ಶ್ರೀ ಈರಣ್ಣ ಬ. ನೂಲ್ವಿ ಅಂತೆಯೇ ಈ ಕೃತಿಯನ್ನು ಸಕಾಲಕ್ಕೆ ಮುದ್ರಿಸಿದವರು ಶರ್ಮಾ ಮುದ್ರಣಾಲಯದ ಶ್ರೀ ಶಾಂತಕುಮಾರ್. ಇವರೆಲ್ಲರಿಗೂ ನಮ್ಮ ಸಂಸ್ಥೆಯ ಪರವಾಗಿ ಧನ್ಯವಾದಗಳು.

''ನಾಕುತಂತಿ'' ಈಗ ೧೦ನೇ ಆವೃತ್ತಿಯಾಗಿ ಪ್ರಕಟಗೊಳ್ಳುತ್ತಿರುವುದು ಹೆಮ್ಮೆಯ ವಿಷಯ. ಕನ್ನಡ ರಸಿಕ ವೃಂದ ಎಂದಿನಂತೆ ತಮ್ಮ ಹೃದಯ ಸಿರಿವಂತಿಕೆಯನ್ನು ತೋರುತ್ತದೆ ಎಂಬ ವಿಶ್ವಾಸ ನಮ್ಮದಾಗಿದೆ.

''ಬೇಂದ್ರೆ ಕುಟೀರ'',
ಹುಬ್ಬಳ್ಳಿ - ೩೦
೨-೧-೨೦೦೪

ಡಾ॥ ಕೆ. ಎಸ್. ಶರ್ಮಾ
ನಿರ್ದೇಶಕರು
ವರಕವಿ ಡಾ॥ ದ. ರಾ. ಬೇಂದ್ರೆ
ಸಂಶೋಧನ ಸಂಸ್ಥೆ ಹಾಗೂ ಬೇಂದ್ರೆ ಸಂಗೀತ ಅಕಾಡಮಿ.

ಕಾರ್ಯಸ್ಥಳ : ''ಬೇಂದ್ರೆ ಕುಟೀರ'', ವಿಶ್ವಶ್ರಮ ಚೇತನ, ಗೋಕುಲ ರಸ್ತೆ ಹುಬ್ಬಳ್ಳಿ-೫೮೦ ೦೩೦. ದೂರವಾಣಿ : ೨೩೩೩೦೪೬೬

''ಕನ್ನಡವೇ ಕಣ್ಣಾಗಿ
ಕಣ್ಣೆ ಕನ್ನಡಿಯಾಗಿ
ಕಂಡಿದ್ದು ನೋಡಿದ್ದು ಒಂದಾಯಿತು.''

''ಶಬ್ದ ಶ್ರುತಿಯಾದಾಗ
ಮಾತು ಕೃತಿಯಾದೀತು''
- ಅಂದತ್ತ

# ಅರ್ಪಣ

॥ ಓಂ ತತ್ ಸತ್ ಪುರುಷಾಯ ನಮಃ ॥

'ವಂದೇ ಮಾತರಂ

- ಅಂ-ದತ್ತ




*"There oneness was not tied to monotone"*

- Savitri

# ೧ ಮತ್ತೆ ಶ್ರಾವಣಾ

೧

ಶ್ರಾವಽಣಾ। ಶ್ರಾವಣಾ।
ಮೈದಂಡಿಗಿ ಮಾಡೀ। ಹಾಡಿದೀ ಕವನಾ।
ಕೈಲಾಸದ ಬುಡಕಽ ಸಿಕ್ಕವನಾ। ಹತ್ತು ತಲೆಯವನಾ
ಬಿಡಿಸೋ। ಹಿಡಿಸೋ। ಆತ್ಮಾರಾಮನ ಭವನಾ। ಶಿವನಾ
ಹರ-ಹರಿ ಒಂದಾದವನಾ। ದವನಾ। ನೀಡಿದೆ। ಅಡಿಗೇ
ಚೈತ್ರದವನಾ। ಬೇರೆಲ್ಲೀ ಹವನಾ। ಪಂಪೀಯವನಾ
ಕೊಂಪೀಯವನನ್ನ ಬ್ಯಾಡಾ। ತುಂಗೀಗೆ। ಭದ್ರೀಗೆ।
ಸರಿ-ಸರಗೂಡಿಸಿ। ಹಾಡೋ ಕವನಾ। ಹಾಡಿದವನಾ

೨

ಹರಹರ ಶ್ರಾವಣಕ ಬಂದಿಽ ಶ್ರುತಿ ತಂದಿಽಽ
ಹರಿಹರಿ ಶ್ರಾವಣಕ ಬಂದಿಽ। ಕೃತಿ ತಂದಿಽಽ
ನೀವು ತಂದೀ-ತಾಯಿ ನಮಗಽ
ಕಂದನು ನಾ ನಿಮಗಽ
ಸ್ಕಂದನ ಶಾಖೇ ನಮಗ। ನಾರದನ ಶಿಖೆ ನಮಗಽ
ಉದ್ದ ನಾಮಾ। ಮತ್ತಽ ಅಡ್ಡಽ ನಾಮಾ
ಯಾವಿವನಽ ಕಾಮಾ ಬಂದಾ। ಶಿವಶಕ್ತೀ ನಡುವಽ
ಅಡುವಽ ಇಡರವನಽ.

ವಸುದೇವಽ ದೇವಕಿ ಗರ್ಭಾ। ತುಂಬಿದ ತುಂಬಿ
ಸೆರೆ ಬಿಡಿಸಿ ಬಂದಿ। ವಿಶ್ವದ ತಂದಿ
ಸುರ-ಅಸುರರ ಕಸರಽ ಕಳೆದೂ
ಮೈ ತಳೆದೂ ಬಾರಯ್ಯಾ
ಶ್ರಾವಽಣಾ ಶ್ರವಣಕೆ ಭವಣೇಯೆ ಬೇಕೇ?
ಭ್ರಮರಾ। ಭ್ರಮರಾಂಬಾ। ನಮ್ಮ ನಿಮ್ಮಾ ತವರಾ
ಗೊತ್ತಿಲ್ಲೇನೋ ಜವರಾ.

೩

ನವಿರಾ ನವಿರಾ, ಮಾಡುವಿ ಯಾಕೀ ಕವರಾ
'ಕವಿಯಿಲ್ಲದವರಾ౽ ಕವರ್ದವರುಂ ಒಳರೇ'
ಎಂದಾ ನೃಪತುಂಗಾ
ಶ್ರೀ ವಿಜಯನ ಲಿಂಗಾ ಸಂಗಾ
ಶ್ರುತಿ ಇಪ್ಪತ್ತೆರಡೂ। ಕೃತಿ ಸಾವಿರದಾ ಹರಡು
ಕಳೆ ಬರಡು, ಮೊರಡಿಗೆ ಮೊರಡಿಗೆ ನವಿಲು
ವಿದ್ಯುದ್ರೇಖಾ౽। ಮೇಘಾಡಂಬರ ನೌಕಾ
ಎಲ್ಲಾ ಗಂಧರ್ವರನಗರಾ। ನಗಲಾ ನಗಲಾ
ನಗನಗ ನವಿಲಾ। ಹಾಡೇಹಗಲಾ
ಶ್ರಾವಣದಲಿ ಅಭಿಜಿದ್ಯೋಗ
ಕಾವ್ಯೋದ್ಯೋಗ.

---

ಭಾವ : ೧೯೬೩, ಶ್ರಾವಣ ಬಂತು, ಸುಮ್ಮನಿದ್ದ ಮೌನದೊಳಗಿಂದ ಶ್ರಾವಣದ ಉನ್ಮಾದವು ಈ ಸಾಮಗೀತ ಬರೆಸಿತು. 'ಕಾವ್ಯೋದ್ಯೋಗ' ಮಾಡಿ ನನ್ನ ಕೆಲಸ ಮುಗಿಸಿದೆನಲ್ಲ ಎಂದುಕೊಂಡು ಬೇಂದ್ರೆ ವಿರಮಿಸಿದರೆ, ಮಧ್ಯಾಹ್ನ ೨ನೇ ಸಾಮಗೀತ ಪ್ರಾರಂಭವಾಯಿತು. ಉರ್ಮಿಯ ಉಕ್ಕು ನಿಲ್ಲಲೊಲ್ಲದು. ಶ್ರಾವಣ-ಆಗಸ್ಟ್ ಇದು ಶ್ರೀ ಅರವಿಂದರ ಮಾಸ.

ಶಬ್ದಾರ್ಥ : ಅಡುವು=ದಟ್ಟವಾಗಿರುವಿಕೆ. ಕಸರ=ಕಸ, ಕೊಳೆ. ಭವಣೆ-ಬವಣೆ=ಕಷ್ಟ, ತೊಂದರೆ. ನವಿರಾ-ನವಿರ್=ರೋಮ, ಕೂದಲು. ಕವರಾ=ಹೊದಿಕೆ. ಮರಳುಮಾಡು ಅಪಹರಿಸು (ತಮಿಳು). ಶ್ರಾವಣದಲಿ ಅಭಿಜಿತ್ ಯೋಗ-ಕಾವ್ಯೋದ್ಯೋಗ-ಅಭಿಜಿತ್ ಎಂಬುದು ೨೮ನೆಯ ನಕ್ಷತ್ರ. ಇದು ಪ್ರತಿದಿವಸ ಸೂರ್ಯನು ನದುನೆತ್ತಿಗೆ ಇದ್ದಾಗ ಬರುವ ಮುಹೂರ್ತ ಯೋಗ, ಶುಭ ಸಮಯ. ತೈತ್ತಿರೀಯ ಬ್ರಾಹ್ಮಣದ ೩ ನೆಯ ಅಷ್ಟಕದಲ್ಲಿ ಇದರ ಉಲ್ಲೇಖವಿದೆ. ದೇವತೆಗಳು ಅಸುರರನ್ನು ಜಯಿಸಿದ್ದು ಇದೇ ಮೂಹೂರ್ತದಲ್ಲಿ. ಶ್ರಾವಣ ಮಾಸವು ವೇದ ವಿದ್ಯಾಶ್ರವಣಕ್ಕಾಗಿ ಮೀಸಲಿಡಬೇಕಾದ ಮಾಸ. ಹೀಗಾಗಿ ಶ್ರಾವಣಮಾಸದಲ್ಲಿ ಅಭಿಜಿತ್ ನಕ್ಷತ್ರ, ಇರುವಾಗ ಮಾಡಿದ ಕಾವ್ಯ ರಚನೆ-ಬೆಳಕನ್ನು ನೀಡಿ ಜ್ಞಾನದಾಯಕವಾಗಿ, ಕತ್ತಲೆಯ-ಅಜ್ಞಾನವನ್ನು ಪರಿಹರಿಸುತ್ತದೆ ಎಂಬುದು ಕವಿಯ ಆಶಯವಾಗಿದೆ.

ವಿಶೇಷ : ನುಡಿ-೧ : ದವನಾ-ದವಣಾ-ದಮನಕ-ಪೂಜೆಯಲ್ಲಿ ಉಪಯೋಗಿಸಲಾಗುವ ಸುವಾಸನೆಯುಳ್ಳ ಒಂದು ವನಸ್ಪತಿ. ಇದರ ಗಿಡ ೧ ಫೂಟ ಎತ್ತರವಿರುತ್ತದೆ. ಈ ವನಸ್ಪತಿಯಿಂದ ರಾಮನವಮಿಯಂದು ರಾಮನಪೂಜೆ, ಚೈತ್ರಶುದ್ಧ ದ್ವಾದಶಿಯಂದು ವಿಷ್ಣು ಪೂಜೆ ಹಾಗೂ ಚೈತ್ರಶುದ್ಧ ಚತುರ್ದಶಿಯಂದು ಶಿವನ ಪೂಜೆ ಮಾಡುವ ಸಂಪ್ರದಾಯ ಉಂಟು. ಹೀಗಾಗಿ ಈ ವನಸ್ಪತಿ ಹರನಿಗೂ, ಹರಿಗೂ ಪ್ರಿಯ. ಈ ವನಸ್ಪತಿಯ ಉಗಮವನ್ನು ಕುರಿತು ಎರಡು ಕಥೆಗಳು ಪ್ರಚಾರದಲ್ಲಿವೆ. ಕಾಮನ ಬೂದಿಯಲ್ಲಿ ಹುಟ್ಟಿ ರತಿಯ ಕಣ್ಣೀರಿನ ಮೂಲಕ ತೊಯ್ದು, ಋಷಿ, ಗಂಧರ್ವ, ದೇವತೆಗಳನ್ನು ಮೋಹಿಸಿ ಬಿಟ್ಟಿದೆ ದವನಾ-ಎಂಬುದು ಒಂದು ಕಥೆ. ಪಾರ್ವತಿಯ ಶಾಪದ ಮೂಲಕ ಶಿವನ ಅಗ್ನಿನೇತ್ರ ದಮನಕ ವೃಕ್ಷವಾಯಿತು. ಈ ವೃಕ್ಷಕ್ಕೆ ಶಿವನು ವಸಂತ ಹಾಗೂ ಮದನನೊಡಗೂಡಿ ಪೂಜೆ ಮಾಡಿದವನ ಮನೋರಥವು ಸಿದ್ಧಿಸಲಿ ಎಂಬ ವರ ಕೊಟ್ಟಿದ್ದನು. ಈ ಪೂಜಾ ದ್ರವ್ಯವನ್ನು ಉಪಯೋಗಿಸುವ ದಮನಕೋತ್ಸವವು ಚೈತ್ರಶುದ್ಧ ದ್ವಾದಶಿಯಿಂದ ಶ್ರಾವಣಮಾಸದವರೆಗೂ ಮಾಡಬಹುದು. ಅಧಿಕ ಮಾಸದಲ್ಲಿ ಮತ್ತು ಗುರು ಹಾಗೂ ಶುಕ್ರ ಅಸ್ತವಾಗಿರುವಾಗ ಉತ್ಸವ ಮಾಡಬಾರದು ಎಂಬ ಕಟ್ಟುನಿಟ್ಟು ಇಲ್ಲಿದೆ.
ನುಡಿ-೨ : ಸ್ಕಂದನ ಶಾಖೆ ನಮಗ-ಇಲ್ಲಿ ಸ್ಕಂದನೆಂದರೆ ಸನತ್‌ಕುಮಾರ. ಛಾಂದೋಗ್ಯ ಉಪನಿಷತ್ತಿನ ಏಳನೆಯ ಅಧ್ಯಾಯದಲ್ಲಿ ವಿವರ ಇದೆ. ಈ ಸ್ಕಂದನು ನಾರದನಿಗೆ ಭೂಮವಿದ್ಯೆ ಕಲಿಸಿದನು. ಶಿಖೆ ಬ್ರಾಹ್ಮಣನ ಚಂಡಿಕೆ ವೇದ ಸ್ಥಾನಿಯ ಎಂಬುದಾಗಿ ಪುರುಷವಿದ್ಯೆಯ ಸಂಕೇತವಾಗಿದೆ ಎಂದು ನಾರಾಯಣೋಪನಿಷತ್ತಿನಲ್ಲಿ ಹೇಳಲಾಗಿದೆ.

## ೨ ಮತ್ತೆ ಶ್ರಾವಣ ಬಂದಾ

೧
ಶ್ವೇತಾರವಿಂದಾ, ರಕ್ತಾರವಿಂದಾ
ಶ್ರವಣಾऽ-ಮಘಾ-ಯೋಗಾ ತಂದಾ
ಮತ್ತೆ। ಶ್ರಾವಣಾ ಬಂದಾ.
"ತೆರೆಗೇ ಇಹುದೋ ಮೇರೆ
ಬಯಲಿಗೆ ಯಾವುದು ಬೇರೇ?
ಬೇರಾಗಿ ಬೆರೆಯುವುದೇ ಕಾರ್ಯಾ
ಓ ಆರ್ಯಾ" ಅಂದಾ.
೨
'ವಿಶ್ವಂ ಆರ್ಯಂ ಕೃಣ್ವನ್'
'ಅಮೃತಸ್ಯ ಪುತ್ರಾಃ'
'ಓಂ ದೇವಾಯ ಜನ್ಮನೇ'!
ದೇವನಿಗೂ ಮಾನವಗೂ ಸಂಬಂಧಾ
ಮುಕ್ತಿಯ ಆಚೆಯ ಭಕ್ತಿಯ
ಭಗವತ್ ಸೃಷ್ಟಿಯ ಬಂಧಾ
ಸಾಮ-ಪ್ರಬಂಧಾ.
೩
ವೃಂದಾ, ವೃಂದಾ, ವೃಂದಾ
ವೃಂದಾವನದಂದಾ। ಛಂದಾ
ಇದು ರಾಸದ ಲೀಲೆ 'Global' ಎಂದಾ
ಭೂಮಂಡಲ-ದೇವನ ಮನೆ ಚಂದಾ
ಬಿಡು ಮೀನಾ ಮೇಷಾ
ತುಂಬಲಿ ಕುಂಭಾ। ಸಿಂಹಕೆ ರವಿ ಬಂದಾ
ಧನಿಷ್ಠಾನಿಷ್ಠಾ। ವಸುಗಳಿಗೆ ಪ್ರತಿಷ್ಠಾ
ಶತತಾऽರಕಾऽ ವರುಣನ ಮುಪ್ಪುರಿ ಪಾಶಾ.

೪
ಅಧಮಾಽ ಮಧ್ಯಮಾಽ ಉತ್ತಮಾಽ
ತಮಸಸ್ಪರಿ ಹರಿಹರಿ, ಪ್ರಸ್ತರ ಹರಹರ
ಎನ್ನುತ್ತಿವೆ ಅಜೈಕ ಚರಣಾ
೫
ಒರುಂಗಾಲ್ ಚಾಂಗು-ಭಲಾ
ಭದ್ರಾಕರಣಾ, ಚಂದ್ರಾಭರಣಾ
ಭಾಲಚಂದ್ರಾ, ಏಕದಂತಾ
ಕುಣಿ ಇಲಿ, ಎಲಿಎಲಿ
ತದ್ಧಿತಾಂತಾ, ಕೃದಂತಾ, ವಕ್ರದಂತಾ
ಸ್ವಭಾವೋಕ್ತಾ ವಕ್ರಾ। ವಕ್ರತುಂಡಾ। ಸುಂಡಲಿನಲಿ
ದುಂಡಾ। ಸುತ್ತಿದಾ ಮೋದಕಾ, ಮಕರಂದಾ
ಮಝಾ, ಪೂತೂ, ಬೊಪ್ಪಾ ಶಿವ-ಶಿವ ಎಂದಾ
ಹಸ್ತಾ, ಕರಾ, ಶುಂಡಾ, ಕಿಷ್ಕಿಂಧಾ ಸಾಸಿವೆಗಣಪಾ
ವಾತಾಪಿಯ ತಣಿಪಾ.
ವಿಘ್ನಕರ್ತಾ, ಹರ್ತಾ!
ಕಳೆಯಲಿ ಮೂಷಕ ದೋಷಾ.

೬

ಓ ಯಕ್ವಾ, ಯಜ್ವಾ, ಸರ್ವತ್ರಾ ಓಂಕಾರಿ
ಪುಳಿನದ ದಾರಿ ಮರುಳ್, ಮರುಳ್ ಮೃತ್ತಿಕಾವತಿ,। ಧೂಲೀಧೂಸರಾ
ಸದಾऽ ಉದಯೋನ್ಮುಖಾ ನೇಸರಾ
ನಿಸರ್ಗಾ, ವಿಸರ್ಗಾ, ಭರ್ಗಾ, ದುರ್ಗಾ
ಹೇರಂಬಾ ಪಿರಿಯಾ ಮಹಾ ಉದರಾ
ಆನಂದಾ। ತುಂಬಾ
ಕೃಷ್ಣನ ಕೈಯ್ಯಲಿ ಕೊಟ್ಟಾ। ಈ ಚಂದ್ರಭಟ್ಟಾ
ಸಾವಿತ್ರಿಯ ಪಟ್ಟಾ
ತೀರಿತು ಬೆಳುದಿಂಗಳ ಇರುಳು
ಸೂರ್ಯನ ಹಗಲಿನ ಕರುಳು
ಕರೆಯುತ್ತಿದೆ ಮಾಘಾ ಮಘಾ ಮಘಾ
ಘುವಾ ಘುವಾ ಗಂಧಾ
ಅರವಿಂದಾ ಬಂದಾ
ಅಗ್ನಿಗು ಸೋಮಗು ಕೊಡುಕೊಳೆ
ತಂದಾ
'ಶ್ರಾವಣಾ ಬಂದಾ। ಕಿವಿ ತೆರಿ' ಎಂದಾ

---

ಭಾವ : ಬೆಳಗಿನ ಸಾಮಗೀತ ರಚನೆಯಿಂದ ತೃಪ್ತಿಯಾಗದ ಪ್ರವಾಹವು ಮುಂದೆ ಸಾಗಿತು. ಶ್ರೀ ಅರವಿಂದರ 'ಸಾವಿತ್ರಿ' ಮಹಾಕಾವ್ಯವು ನವೀನ ಕಾವ್ಯಕ್ಕೆ ಶ್ರೀ ಗಣೇಶಾಯನಮಃ ಆಗಿದೆ ಎಂದು ಧ್ವನಿಗೂಡುತ್ತ ಈ ಕವನದ ಸೃಷ್ಟಿ ಆಯಿತು.

ವಿಶೇಷ : ಪ್ರಸ್ತರ=ಕಲ್ಲು, ಬಂಡೆ; ಮೀನಮೇಷಾ=ಹನ್ನೆರಡು ರಾಶಿಗಳಲ್ಲಿ ಮೊದಲಿನ ಹಾಗೂ ಕೊನೆಯ ರಾಶಿ, ಅನುಮಾನ, ನಿರ್ಧಾರಕ್ಕೆ ಬರಲಾರದ ಸ್ಥಿತಿ; ಒರುಂಗಾಲ್ (ತಮಿಳು ಶಬ್ದ) ಒರುಂ=ಒಂದು+ಕಾಲ್=ಚರಣ; ಅಜೈಕ ಚರಣಾ=ಅಜೈಕಪಾತ್ - ಇದು ಋಗ್ವೇದೀಯ ದೇವತೆ; ಚಾಂಗುಭಲಾ=ಒಳ್ಳೆಯದಾಗಲಿ ಎಂಬ ಶುಭ ಸೂಚಕ ಮಾತು; ತದ್ಧಿತಾಂತ=ಗುಣವಾಚಕವು ನಾಮವಾಚಕವಾಗುವುದು. ಕೃದಾಂತ=ಕ್ರಿಯೆಯು ನಾಮವಾಚಕವಾಗುವುದು. ಸತ್ಯವು ಗುರಿಯನ್ನು ಸಾಧಿಸುವವರೆಗೆ ಪ್ರಯತ್ನ. ಶ್ವೇತಾರವಿಂದ, ರಕ್ತಾರವಿಂದ ಶ್ರವಣಾ-ಮಘಾಯೋಗಾತಂದಾ=ಶ್ರೀ ಅರವಿಂದರು ಹುಟ್ಟಿದ್ದು ೧೫-೮-೧೮೭೨, ಅವರ ಜನ್ಮ ನಕ್ಷತ್ರ ಶ್ರವಣ ಮತ್ತು ಶ್ರೀ ಮಾತೆಯವರು ಹುಟ್ಟಿದ್ದು ೨೧-೨-೧೮೭೮. ಅವರ ಜನ್ಮ ನಕ್ಷತ್ರ ಮಘಾ. ಇವರಿಬ್ಬರ ಭೆಟ್ಟಿ ಒಂದು ಅಪೂರ್ವ ಯೋಗ. ಶ್ರೀ ಅರವಿಂದರು ನಡೆಸಿದ ಪತ್ರಿಕೆಯ ಹೆಸರು ''ಆರ್ಯ''. ವಿಶ್ವಂ ಆರ್ಯಂ ಕೃಣ್ವನ್-ಋಗ್ವೇದದೊಳಗಿನ ಮಂತ್ರ, ಅಮೃತಸ್ಯಪುತ್ರಾಃ=ತೈತ್ತರೀಯ ಸಂಹಿತೆಯೊಳಗಿನ ಮಂತ್ರ, ಓಂ ದೇವಾಯಯ ಜನ್ಮನೇ-ಋಗ್ವೇದ ಮಂತ್ರ. ಈ ಮೂರೂ ವಿವೇಕಾನಂದರಿಗೆ ಸ್ಪೂರ್ತಿ ನೀಡಿದ ವಾಕ್ಯಗಳು. ಅನಾರ್ಯರನ್ನು ಆರ್ಯ ಮಾಡುವ ಕ್ರಿಯೆ ನಿರಂತರವಾಗಿ ನಡೆಯಬೇಕಾಗಿದೆ ಎಂಬುದನ್ನು ವಿವೇಕಾನಂದ ಹಾಗೂ ಶ್ರೀ ಅರವಿಂದರು ಕಂಡುಕೊಂಡಿದ್ದರು. ಆರ್ಯ ಎಂಬುದು ಸಂಸ್ಕೃತಿ ವಾಚಕ ಶಬ್ದವೆ ಹೊರತು, ಜನಾಂಗ ವಾಚಕವಲ್ಲ. ಆರ್ಯಕ್ಕೆ ಪ್ರತಿಶಬ್ದ ಅನಾರ್ಯ; ದ್ರಾವಿಡವಲ್ಲ. ಇಡೀ ವಿಶ್ವವೇ ಆರ್ಯ ಸಂಸ್ಕೃತಿಯಿಂದ ಆವಿಷ್ಕೃತವಾಗಲಿ ಎಂಬುದು ಈ ಕವನದ ಹೃದಯ.

ತುಂಬಲಿ ಕುಂಭಾ! ಸಿಂಹಕೆ ರವಿ ಬಂದಾ। ಧನಿಷ್ಠಾನಿಷ್ಠಾ। ವಸುಗಳಿಗೆ ಪ್ರತಿಷ್ಠಾ। ಶತತಾರಕಾऽ ವರುಣನ ಮುಪ್ಪುರಿ ಪಾಶಾ-ಕುಂಭ ಸಂಭವರು ಜನಿಸಿದಾಗ (ಅಗಸ್ತ್ಯ, ವಸಿಷ್ಠ, ದ್ರೋಣ ಮುಂತಾದವರು) ಅವರು ಕಾಲ ದಿಗ್ದರ್ಶನ ಮಾಡಿದರು. ಕಾಲ ದಿಗ್ದರ್ಶನ ಮಾಡುವ ಮಹಾಪುರುಷರು ಹುಟ್ಟುವಾಗ ಸೂರ್ಯನು ತನ್ನ ಉಚ್ಚ ಸ್ಥಾನವಾದ ಸಿಂಹರಾಶಿಗೆ ಪ್ರವೇಶಿಸುತ್ತಾನೆ. ಶ್ರಾವಣದ ಅನಂತರ ಬರುವ ನಕ್ಷತ್ರ ಧನಿಷ್ಠಾ. ಅಷ್ಟವಸುಗಳ ನಕ್ಷತ್ರ ಧನಿಷ್ಠಾ. ಸೂರ್ಯನ ಗತಿ ಉಚ್ಚವಾದಾಗ ಅಷ್ಟವಸುಗಳಿಗೆ ಪ್ರತಿಷ್ಠೆ ಸಿಗುತ್ತದೆ. ಶತತಾರಕಾ ಇಂದ್ರ. ಅಷ್ಟವಸುಗಳು ಇಂದ್ರನಿಗೆ ಪಟ್ಟಾಭಿಷೇಕ ಮಾಡುವರು. ವರುಣನಾ ಪಾಶಾ-ಋತಧರ್ಮ ಸತ್ಯ ಒಳಗೊಂಡಿದ್ದು ವಿಶ್ವವ್ಯಾಪಿ ಕಾರ್ಯ ಮಾಡಬೇಕಾದರೆ ಇಂದ್ರನು ಅಧಿಕಾರ ಆರೂಢನಾಗಬೇಕು. ವಿಶ್ವವೇ ಆರ್ಯ ಸಂಸ್ಕೃತಿ ಉಳ್ಳದ್ದಾದಾಗ ಅಸುರ ಶಕ್ತಿಗೆ ಸೋಲು ನಿಶ್ಚಿತ ಅಜೈಕಚರಣ=ಅಜೈಕಪಾದ ಎಂಬ ದೇವತೆ ವೇದೋಕ್ತ ಇತಿಹಾಸದಲ್ಲಿ ಒಂದು ಪ್ರಮುಖ ಕಾರ್ಯ ಮಾಡಿದೆ. ಗಾಯತ್ರಿ ಛಂದಸ್ಸಿಗೆ ಮೂಲದಲ್ಲಿ ನಾಲ್ಕೇ ಅಕ್ಷರಗಳಿದ್ದವು.

ತ್ರಿಷ್ಟುಪ್ ಹಾಗೂ ಜಗತಿ ಛಂದಸ್ಸುಗಳು ಪಕ್ಷಿಗಳಾಗಿ ನಭಕ್ಕೆ ಹಾರಿ ತ್ರಿವಿಕ್ರಮನ ಮೂರನೆಯ ಪಾದದಲ್ಲಿರುವ ಅಮೃತವನ್ನು ತರಲು ಹೊರಟಾಗ, ಅವು ತಮ್ಮ ೨+೨ ಅಕ್ಷರ ಕಳೆದುಕೊಂಡು ಹಿಂದೆ ಬಂದವು. ಗಾಯತ್ರಿ ಗರುಡ-ಶ್ಯೇನ ಪಕ್ಷಿರೂಪವಾಗಿ ಹಾರಿ ಅಮೃತವನ್ನು ಹಾಗೂ ತ್ರಿಷ್ಟುಪ್, ಜಗತಿ ಕಳೆದುಕೊಂಡ ೪ ಅಕ್ಷರ ಪಡೆದುಕೊಂಡು ೮ ಅಕ್ಷರಿನ ಛಂದಸ್ಸಾಯಿತು. ಈ ವಿಜಯದಲ್ಲಿ ಅಜೈಕಪಾದ ದೇವತೆ ಸಹಾಯ ಮಾಡಿತು. ಈ ಅಜೈಕ ಚರಣ ದೇವತೆ ಗಣಪತಿಯಾಗಿರಬಹುದು ಎಂಬುದು ಕವಿಯ ಅನುಮಾನ. ಆದುದರಿಂದ ಮುಂದಿನ ಕವನವೆಲ್ಲ ಗಣಪತಿಯ ಚಿಂತನದಲ್ಲಿಯೇ ಸಾಗುತ್ತದೆ. ಸಪ್ತರ್ಷಿಗಳು ಮಘಾನಕ್ಷತ್ರದಲ್ಲಿ ಪ್ರವೇಶಿಸಿದಾಗ ಕಾಲ ಪರಿವರ್ತನೆಯಾಗುತ್ತದೆ ಎಂಬುದಾಗಿ ಶಾಸ್ತ್ರಗಳು ಹೇಳಿವೆ. ಅಂಥ ಒಂದು ಯೋಗ ಶ್ರೀ ಮಾತಾರವಿಂದರ ಮಿಲನ ಎಂಬ ಸೂಚನೆ ಇದೆ. ತಮಸಸ್ಪರಿ=ಮಾಧ್ಯಾಹ್ನಿಕ ಸಂಧ್ಯೋಪಾಸನೆಯಲ್ಲಿ ಬರುವ ಸೂರ್ಯನ ವರ್ಣನೆಯಲ್ಲಿ ಬರುವ ಶಬ್ದ. ಕೃಷ್ಣನ ಕೈಯಲ್ಲಿ ಕೊಟ್ಟಾ। ಈ ಚಂದ್ರಭಟ್ಟಾ। ಸಾವಿತ್ರಿಯ ಪಟ್ಟ-ಗಣೇಶ ಪುರಾಣ ಹಾಗೂ ಶ್ರೀ ಭಾಗವತದಲ್ಲಿ ಬರುವ ಸ್ಯಮಂತಕ ಮಣಿಯ ಆಖ್ಯಾನದ ಹಿನ್ನೆಲೆ ಇಲ್ಲಿದೆ. ಸೂರ್ಯನಿಂದ ಸ್ಯಮಂತಕ ಮಣಿಯನ್ನು ಪಡೆದವನು ಸತ್ರಾಜಿತ. ಸ್ಯಮಂತಕ ರತ್ನವನ್ನು ಅಶುಚಿಯಿಂದ ಧರಿಸಿದವನು ಕೊಲ್ಲಲ್ಪಡುತ್ತಾನೆ ಎಂದು ಸೂರ್ಯ ಹೇಳಿದ್ದರೂ ಅದು ಗೊತ್ತಾಗದೆ, ಸತ್ರಾಜಿತನ ತಮ್ಮ-ಪ್ರಸೇನ ರತ್ನವನ್ನು ಕೊರಳಲ್ಲಿ ಧರಿಸುತ್ತಾನೆ. ಇದರ ಪರಿಣಾಮವಾಗಿ ಸಿಂಹವು ಪ್ರಸೇನನನ್ನು ಕೊಂದು ಶವವನ್ನು ಎಳೆದೊಯ್ಯುತ್ತದೆ. ಈ ಕಾಲಕ್ಕೆ ಕೃಷ್ಣನು ಸ್ಯಮಂತಕ ಮಣಿಯ ಮೋಹದಿಂದ ಪ್ರಸೇನನನ್ನು ಕೊಂದ ಎಂಬ ಆರೋಪ ಬರುತ್ತದೆ. ಆರೋಪ ಪರಿಹಾರ ಮಾಡಿಕೊಳ್ಳುವುದಕ್ಕಾಗಿ ಕೃಷ್ಣನು ಪ್ರಸೇನನ ಹೆಣ ಹುಡುಕುವಾಗ ಪ್ರಸೇನನ ಹೆಣ ಹಾಗೂ ಸಿಂಹದ ಹೆಜ್ಜೆ ಗುರುತು ಕಾಣುತ್ತವೆ. ಆ ಹೆಜ್ಜೆಗಳನ್ನು ಅನುಸರಿಸಿ ಗುಹೆಗೆ ಬಂದಾಗ, ಅಲ್ಲಿ ಜಾಂಬವಂತ ತನ್ನ ಮಕ್ಕಳ ಆಟಿಗೆಯಾಗಿ ಸ್ಯಮಂತಕ ರತ್ನವನ್ನು ತೊಟ್ಟಿಲಕ್ಕೆ ಕಟ್ಟಿದ್ದನ್ನು ಕೃಷ್ಣ ನೋಡುತ್ತಾನೆ, ಸಿಂಹವನ್ನು ಕೊಂದು ಸ್ಯಮಂತಕ ಮಣಿ ಪಡದುದಾಗಿ ಜಾಂಬುವಂತ ಹೇಳುತ್ತಾನೆ. ಜಾಂಬುವಂತನೊಂದಿಗೆ ಯುದ್ಧ ಮಾಡಿ, ಸ್ಯಮಂತಕ ಮಣಿಯನ್ನು ಪಡೆದು, ಅದನ್ನು ಸತ್ರಾಜಿತನಿಗೆ ಅರ್ಪಿಸಿ, ವಿವರವಾದ ಕಥೆ ಹೇಳಿ, ತನ್ನ ಮೇಲಿನ ಆರೋಪ (ಚಂದ್ರನೇ ಕಾರಣ) ಪರಿಹಾರಮಾಡಕೊಂಡು ಸಾವು ಇಲ್ಲದ-ಸಾವಿತ್ರಿಯ ಪಟ್ಟದಂಥ ಅಮರ ಕೀರ್ತಿಯನ್ನು ಕೃಷ್ಣ ಪಡೆಯುತ್ತಾನೆ. ಶ್ರವಣಕ್ಕೆ ಮೀಸಲಾದ ಒಂದು ಶ್ರಾವಣಮಾಸದಲ್ಲಿ ಬೇಂದ್ರೆಯವರಲ್ಲಿ ನಡೆದ ಚಿಂತನೆಯ ಒಂದು ಘನರೂಪ ಈ ಕವನ. ಕಾಲ ಪರಿವರ್ತನೆಗಾಗಿ, ಆರ್ಯ ಸಂಸ್ಕೃತಿಯ ಪ್ರತಿಷ್ಠಾಪನೆಗಾಗಿ ಕವಿ ಬಯಸಿದ್ದು ಉಂಟು.

# ೩ ಹೆರಿಗೆ

೧
ಮೂರ್ಧನ್ಯದ ತೇಜಸ್ವಿನ
ಯಾವುದೊ ಕಿರಣ
ತಳೆದಿದೆ ವರ್ಣ ವರ್ಣ
ಶ್ರುತಿಗೋ ಆಭರಣ.
೨
ಋಷಿ ತೆರೆದನು
ಹೃದಯದ ಗವಸಣಿಗೆಯನು
'ಲುಸಿಕಾss! ಲುಸಿಕಾ'ss ಎಂದೊರೆದನು
ಮಿಡಿದನು ತಂತಿಯ ಹೆಣಿಗೆಯನು:-
"ಅರಿ-ಇರು- ಹರಿ ಹರಹರ ಹರಿಹರಿ"
ಗಿರಿಗಿರಿ ಸುತ್ತೀ ಇಳಿದೂ ಇಳಿ ಇಳಿಗೆ
ಈ ಗಳಿಗೆ, ಆ ಗಳಿಗೆ?
ಎಂದನು ಬಂದನು ಬಳಿಗೆ
ಅಲ್ಲೋ ಮಾತೊರಗಿತ್ತು, ಮೌನದ ಸೆರಗಿನಲಿ
ಅಂತಃಕರಣದ ಬೆರಗಿನಲಿ.
೩
ಬಾ ರಸಿಕನೆ ಹಿಮವನು ಹರಿಸು
ತಮವನು ಸಂಹರಿಸು
ಕವನ ಭಗೀರಥ-ರಥವು
ನಿನಗಿದೆ ಸಾರಥ್ಯ.
ಹಿತಮಿತವಿರಲೀ ಸರಣಿ
ಸಾತ್ವಿಕ ಪಥ್ಯ.
೪
ಅಲ್ಲೊಬ್ಬರ ಇಲ್ಲೊಬ್ಬರ
ಅಬ್ಬರವಿಲ್ಲದ ಅಂಬರ-
ದಲಿ ನಡೆಸಲಿ ನೃತ್ಯ
ಹೋ! ಹೋ! ಪಾವನ ಕೃತ್ಯ.

೫

ಪಾವಕಸ್ತುತ್ಯ, ಹೋತಾऽऽ ತಾತಾऽ ತಾತಾऽ
ಗಮಗಮ ಗಂಧದ ಮಾರ್ಗ.
ಗಂಧರ್ವರ ಸ್ವರ್ಗ.
ಕಾಕುಸ್ವರದಲಿ ಸ್ಫುರಿಸುವ ಲೌಕಿಕ ಅಪವರ್ಗ.
ತೇಜಸ್ಸಿನ ಗತಿಯಲ್ಲಿದೆ ನೀರೆಯ ನೆರಿನೆರಿಗೆ
ಅರ್ಥದ ಶಬ್ದದ ಸಂಧಿಯ
ಸದ್ಭಾವದ ಹೆರಿಗೆ.

---

ಭಾವ : ಕವಿಯ ತಪಸ್ಸು, ಕವಿಯ ಹೃದಯ ಶಕ್ತಿ, ಕಾವ್ಯ ರಸಿಕ, ಕಾವ್ಯವನ್ನು ಸ್ವಾಗತಿಸುವ ಉತ್ತರೋತ್ತರ ಸಮಾಜ ಇವೆಲ್ಲವೂ ಕಾವ್ಯದ ವಿಸ್ತಾರದಲ್ಲಿ ಕಾರ್ಯ ಮಾಡುತ್ತವೆ. ಸ್ವರ್ಗದ ಮಂದಾಕಿನಿ ಇಳಿಯಬೇಕು. ಭಗೀರಥ ಸಾಹಸ, ಮುಂದಿನ ಹಾದಿ ಸಿದ್ಧಪಡಿಸಬೇಕು. ಬಂದ ಗಂಗೆಗೆ ಆರತಿ ಎತ್ತಿ ಸ್ವಾಗತಿಸುವವರೂ ಬೇಕು. ಈ ಪ್ರತಿಭಾ ಪ್ರಭಾವ ಥಾಯ್ದ ಜ್ಯೋತಿ: ಸರಣಿಯಲ್ಲಿ ಶಬ್ದಾರ್ಥದ ಸಂಧಿಯೊಳಗಿಂದ ಸದ್ಭಾವವು ಕಾವ್ಯರೂಪವಾಗಿ ಮಿಂಚಿ ಹೋಗಿದ್ದು, ಹಿಂಚಿನಿಂದ ಲೆಕ್ಕಕ್ಕೆ ಬರುತ್ತದೆ. ಅಪ್ಸರೆ ಹೋದ ಮೇಲೆ ಆಕೆಯ ಪಥದಲ್ಲಿಯೇ ಒಂದು ವಿಚಿತ್ರ ಧ್ವನಿ ಇರುತ್ತದೆ.

ಶಬ್ದಾರ್ಥ : ಅಪವರ್ಗ=ಮುಕ್ತಿ ಮೋಕ್ಷ.



## ೪ ನಾಕು ತಂತಿ

**ಒಂದು**

೧

ಆವು ಈವಿನ
ನಾವು ನೀವಿಗೆ
ಆನು ತಾನದ
ತನನನಾ

೨

ನಾನು ನೀನಿನ
ಈ ನಿನಾನಿಗೆ
ಬೇನೆ ಏನೋ?
ಜಾಣೆ ನಾ

೩

ಚಾರು ತಂತ್ರಿಯ
ಚರಣ ಚರಣದ
ಘನಘುನಿತ ಚತು-
-ರಸ್ವನಾ

೪

ಹತವೊ ಹಿತವೋ
ಆ ಅನಾಹತಾ
ಮಿತಿಮಿತಿಗೆ ಇತಿ
ನನನನಾ

೫

ಬೆನ್ನಿನಾನಿಕೆ
ಜನನ ಜಾನಿಕೆ
ಮನನವೇ ಸಹಿ-
ತಸ್ತನಾ:

ಎರಡು

೧
ಗೋವಿನ ಕೊಡುಗೆಯ
ಹಡಗದ ಹುಡುಗಿ
ಬೆಡಗಿಲೆ ಬಂದಳು
ನಡುನಡುಗಿ;

೨
ಸಲಿಗೆಯ ಸುಲಿಗೆಯ
ಬಯಕೆಯ ಒಲುಮೆ
ಬಯಲಿನ ನೆಯ್ಗೆಯ
ಸಿರಿಯುಡುಗಿ;

೩
ನಾಡಿಯ ನಡಿಗೆಯ
ನಲುವಿನ ನಾಲಿಗೆ
ನೆನೆದಿರೆ ಸೋಲುವ
ಸೊಲ್ಲಿನಲಿ;

೪
ಮುಟ್ಟದ ಮಾಟದ
ಹುಟ್ಟದ ಹುಟ್ಟಿಗೆ
ಜೇನಿನ ಥಳಿಮಳಿ
ಸನಿಹ ಹನಿ;

೫
ಬೆಚ್ಚಿದ ವೆಚ್ಚವು
ಬಸರಿನ ಮೊಳಕೆ
ಬಚ್ಚಿದ್ದಾವುದೊ
ನಾ ತಿಳಿಯೆ.

೬
ಭೂತದ ಭಾವ
ಉದ್ಭವ ಜಾವ
ವೊಲೆ ಊಡಿಸುವಳು
ಪ್ರತಿಭೆ ನವ.



ಮೂರು

೧

'ಚಿತ್ತೀಮಳಿ, ತತ್ತೀ ಹಾಕತಿತ್ತು
ಸ್ವಾತಿ ಮುತ್ತಿನೊಳಗ
ಸತ್ತಿsಯೊ ಮಗನs
ಅಂತ ಕೂಗಿದರು
ಸಾವೀ ಮಗಳು, ಭಾವೀ ಮಗಳು
ಕೂಡಿ'

೨

'ಈ ಜಗ, ಅಪ್ಪಾ, ಅಮ್ಮನ ಮಗ
ಅಮ್ಮನೊಳಗ ಅಪ್ಪನ ಮೊಗ
ಅಪ್ಪನ ಕತ್ತಿಗೆ ಅಮ್ಮನ ನೊಗ
ನಾ ಅವರ ಕಂದ
ಶ್ರೀ ಗುರುದತ್ತ ಅಂದ.'

**ನಾಕು**

೪

'ನಾನು' 'ನೀನು'
'ಆನು' 'ತಾನು'
ನಾಕೆ ನಾಕು ತಂತಿ,

೨

ಸೊಲ್ಲಿಸಿದರು
ನಿಲ್ಲಿಸಿದರು
ಓಂ ಓಂ ದಂತಿ!
ಗಣನಾಯಕ
ಮೈ ಮಾಯಕ
ಸೈ ಸಾಯಕ ಮಾಡಿ
ಗುರಿಯ ತುಂಬಿ
ಕುರಿಯ ಕಣ್ಣು
ಧಾತು ಮಾತು
ಕೂಡಿ.

---

ಭಾವ : ನಾಕು ತಂತಿಯು ನಾಕು ಭಾಗಗಳು. ಒಂದೇ ಭಾವದ ನಾಕು ಮಗ್ಗಲು. ೧ರಲ್ಲಿ ಧ್ವನಿ ಪ್ರಬಲವಾದರೆ, ೨ರಲ್ಲಿ ಪ್ರತಿಮೆಗಳ ಸಾಲಿವೆ. ೩ನೆಯದರಲ್ಲಿ ಒಂದು ಸವಾಲು ಜವಾಬು ಇದೆ. ೪ನೆಯ ವಿಭಾಗ ಮೊದಲನೆಯದರ ಧ್ವನಿಗೆ ವಾಗರ್ಥ ದಾಂಪತ್ಯವನ್ನು ಕಿಂಚಿತ್ ಒಡದೇ ಹೇಳುತ್ತದೆ.

ಶಬ್ದಾರ್ಥ : ಆವು=ಆಕಳು, ಹಸು. ಈವು=ಕೊಡುವಿಕೆ. ಉದ್ಭವ=ಉತ್ಪತ್ತಿ ಜನ್ಮ. ಚಿತ್ತೀಮಳಿ=ಚಿತ್ರಾ ನಕ್ಷತ್ರದ ಮಳಿ. ಸ್ವಾತಿ=ಸ್ವಾತಿ ನಕ್ಷತ್ರದ ಮಳೆಯ ಹನಿ ಚಿಪ್ಪಿನಲ್ಲಿ ಸೇರಿದರೆ ಅದು ಮುತ್ತಾಗುತ್ತದೆ. ಇದು ಸೃಷ್ಟಿ ವೈಚಿತ್ರ್ಯ.

## ೫ ಅಣು-ಮಹತ್

(ಅ)

೧

'ಶೂನ್ಯದಲ್ಲಿ ಲೋಕೋದಯ
ಶೂನ್ಯದಲ್ಲಿ ಲೋಕಲಯ'
ಬುದ್ಧಿಶೂನ್ಯ ಮೊಳಗಿದ
ಇದ್ದ ಹಾಗೆ ಮುಳುಗಿದ

೨

ಗಲನ ಮತ್ತೆ ಪೂರಣ
ಜೀವ ಒಳಗೆ ಹೂರಣ
ಜೀವ ಪ್ರಾಣ
ಪ್ರಾಣ ಜೀವ
ಲೋಕದಾಚೆ ಶೂನ್ಯವು
ಲೋಕವೇ ಅನನ್ಯವು
ಲೋಕೋತ್ತರನಾಗಬೇಕು
ಲೋಕೋತ್ತಮ ಜೀವನು

೩

ಲೋಕ-ದೇಹ-ಲೋಚನಾ
ಜ್ಞಾನ-ಸ್ನೇಹ-ಶೋಷಣಾ
ಅಗ್ನಿಗಿಹುದು ಅಸ್ತ-ಉದಯಾ
ಪ್ರಳಯವೆ ಅದರಾಲಯಾ,
ಏಕೆ ಭಯಾ ಸದಾ ಅಭಯಾ
ಸತ್ತೆಂಬುದು ತತ್ತಿಯು
ಎಣ್ಣೆ ಹಣತೆ ಬತ್ತಿಯು
ಅಧಮೋತ್ತಮ ಮಧ್ಯಮ
ಬುದ್ಧ-ಧಮ್ಮ-ಸಂಘ ಸಮ
ವಿಷಮದಲ್ಲಿ ಶೂನ್ಯವು
ವಿರಕ್ತ ಕ್ಷತ್ರ ಜನ್ಯವು

(ಆ)

೧

ಸ್ಥಲವೇ ಚಲವಾಗುತ್ತಲೆ
ಜ್ವಲಿಸಿತ್ತಾಲೋಚನಾ
ಜಡವು ಜಲಿಸಿ, ನೀರು ನೆಲಿಸಿ
ಕಂಡೆ ಭಕ್ತ ಮೋಚನಾ.

೨

ಕನ್ನಡವೇ ಕಣ್ಣಾಗಿ
ಕಣ್ಣೆ ಕನ್ನಡಿಯಾಗಿ
ಕಂಡಿದ್ದು ನೋಡಿದ್ದು ಒಂದಾಯಿತು
ಇರವು ಇರವಿನೊಳಿತ್ತು
ಅರಿವು ಅರಿವಿನೊಳಿತ್ತು
ಇರವು, ಅರಿವೂ, ಹರಿವು ನಂದಾಯಿತು.
ಅದುವೆ ಮುಂದಾಯಿತು
ಇದುವೆ ಹಿಂದಾಯಿತು
ನಡುವೆ ನಿಂದಾದಾಗ ಮಡುವಾಯಿತು.
ನಂದು ನಿಂದೂ ಒಂದು
ಎಡ ಬಲವು ಹೊಲೆಹೊಂದು
ನೆತ್ತಿ ಬಿತ್ತಿಗು ಉದ್ದ ಶಿವನ ಧಾರ.

ಒಳಗೆ ಇದ್ದ ಅಗಸ್ತ್ಯ
ಹೊರಕೆ ಇದ್ದ ಪುರಸ್ತ್ಯ
ಒಳ-ಹೊರಗು ನೆರೆನೆರೆತು ಏಕಸಾರ
ಬಿಂಬ ಮೂರ್ತಿಯ ಚೆಂದ
ಸಚ್ಚಿತ್ತು ಆನಂದ
ಬಿನ್ನಾಣ ಭಕ್ತಿಯಲಿ ಗಡುವಾಯಿತು.
ಊರು ಮೂರರ ದೀಪ
ಬೆಳಗು ಶ್ವೇತ ದ್ವೀಪ
ವಿಟ್ಠಲನ ಇತ್ತಂಡ ಸೂತ್ರದಾಧಾರ
ಉಪನಿಷತ್ ಸಾರ

೩
ದೇವ ತೇಜದ ನೀರು
ನಾರಾಯಣನ ಊರು
ಊರ್ವಶಿಯ ಬಸಿರಿನಲಿ ಮಿತ್ರ ವರುಣ
ಆ ವಸಿಷ್ಠನು ಮತ್ತೆ ಆ ಅಗಸ್ತ್ಯನ ಉದಯ
ಎಂಟು ವಸುಗಳ ಗಂಟು
ಘನಗೊಂಡಿತು
೪
ಒಂದೆ ಇಪ್ಪತ್ತೇಳು
ಮುಂದೆ ಮೂವತ್ತೇಳು
ಮೂವತ್ತು ಆರರಲಿ ಅರವತ್ತು ಮೂರು
ಒಂದು ಸೊನ್ನೆಯ ಹಿಂದೆ
ಭವ-ಭಾವ- ಬಲದಿಂದೆ
ನೂರು ನೂರರೊಳಿತ್ತು ಸಾವಿರದ ಊರು
ಮಾತುಃ ಸರೋವರದ
ಅರವಿಂದವರಳಿರಲು
ಗಂಧ ಗಂಧದೊಳೀಗ ಭೂತಿಬುಕ್ಕಿಟ್ಟು
ತಾಳ ನಾದಾಲಯವು
ಮೈಯೆ ಮಹಿಮಾಮಯವು
ಜೀವರಸ ಭಾವರಸ ಸಮರಸಕ್ಕಿಟ್ಟು
೫
ಓಂ ಜ್ಞಂ ನಮೋ ಓಂ। ಹುಂಕಾರ ಶಂಖಾ
ನಭದಲ್ಲಿ ಹಂಸಾ। ಶೀರ್ಷಾವತಂಸಾ
ನಂದಿ ಆನಂದಿ। ನೀ ಶಿವನ ಬಂದಿ
ಓ ಹನುಮ ಪ್ರಣಮಾ। ಸುಮನಮನ ಅಮಮಾ
ಗರುಡ ಗರಿಗೆದರಿ। ತುಂಬಿಹನು ಚೆದುರಿ
ಗಣಪನಾ ಇಲಿಯು। ಬೆಲ್ಲವೇ ಬಲಿಯು
ಶಿವನಾಗಬಂಧಾ। ತಾರಕನ ಕೊಂದಾ
ಕಾಮಕಮನೀಯಾ। ರಾಮ ರಮಣೀಯಾ
ಇದಿರಿಗಿಹನಿಂದ್ರಾ। ಸೂರ್ಯನಿಗೆ ಚಂದ್ರಾ
ಹೊಕ್ಕಳದ ಬ್ರಹ್ಮಾ। ಇಕ್ಕಳದ ತಮ್ಮ
ಉನ್ನಿದ್ರ ಮೀನಾ। ತನಗೆ ಆಧೀನಾ
ವಾಸುವಿಗೆ ಶೇಷಾ। ಕ್ಲಿಂಗೇಕೆ ಕ್ಲೇಶ
ಅಷ್ಟದಿಗ್ಗಜಕೆ। ನೆಲೆ ನೀರು ನಿಜಕೆ
ಕೂರ್ಮನೋ ಕೂರ್ಮ। ಹ್ರೀಂ ಪ್ರೇಮ ಮರ್ಮ
ಇದು ಶ್ವೇತ-ಕೃಷ್ಣಾ। ಆಗಲಿ ವಿತೃಷ್ಣಾ.

ಭಕ್ತಿ ಮಾಧುರ್ಯದಲಿ ಪ್ರೇಮಶಕ್ತಿ
ಶ್ರೀಕೃಷ್ಣ-ರಾಧೆಯ್ಯಲಿ ರಂಜಕ ವಿರಕ್ತಿ

---

ಭಾವ : ಒಂದು ಮಹತ್ ವಿಷಯವನ್ನು ಅಣುರೂಪವಾಗಿ ಇಲ್ಲಿ ಮೂಡಿಸಿದೆ. ಸರ್ವ ಸ್ಸಾಹಿತ್ಯಕ್ಕೂ ಬಳುವಳಿಯಾಗಿ ಕನ್ನಡದಲ್ಲಿ ಬಂದ ಸಂಪತ್ತಿನ ದರ್ಶನವು ಇಲ್ಲಿ ಪ್ರತಿಬಿಂಬಿತವಾಗಿದೆ. ಮುಂದಿನ ಸಾಹಿತ್ಯ ನಿರ್ಮಿತಿಗೆ ಇದೊಂದು ಹಾದಿ.

ಶಬ್ದಾರ್ಥ : ಗಲನ=ಸೋರುವಿಕೆ, ಇಳಿಸುವಿಕೆ. ಪೂರಣ=ಏರುವಿಕೆ, ಭರತಿ. ಹೊಲೆ=ಹೊಲಿಗೆ. ಶೀರ್ಷ=ತಲೆ. ಅವತಂಸ=ಹೂವಿನ ಮಾಲೆ. ಸುಮನ ಮನ=ಹೂವಿನಂಥ ಮನಸ್ಸು. ವಿ+ತೃಷ್ಣಾ=ವಿತೃಷ್ಣಾ=ವಿಶೇಷ ಅಭಿಲಾಷೆ, ಆತುರ, ಎಳೆತ.

ವಿಶೇಷ : ಊರು ಮೂರರ ದೀಪ. ಬೆಳಗು ಶ್ವೇತದ್ವೀಪ. ವಿಟ್ಠಲನ ಇತ್ತಂಡ ಸೂತ್ರದಾಧಾರ, ಉಪನಿಷತ್ ಸಾರ-ವಿಷ್ಣುವಿನ ಕಲಿಯುಗದ ಅವತಾರ ವಿಟ್ಠಲ. ದೇವತೆಗಳಿಗೂ, ದಾನವರಿಗೂ ಸಮನಾಗಿಯೇ ಪೂಜ್ಯನಾದವನು ವಿಷ್ಣು, ಇದನ್ನೇ ಶ್ವೇತ ದ್ವೀಪದ ವಾಸಿಗಳು ಎಂದು ಋಗ್ವೇದದ ಖಿಲ ಜಿತಾಂತ ಸ್ತೋತ್ರಗಳಲ್ಲಿ ಹೇಳುತ್ತಾರೆ. ಇದೇ ಉಪನಿಷತ್ ಸಾರ.

ಒಂದೇ ಇಪ್ಪತ್ತೇಳು............ಸಾವಿರದ ಊರು-ಒಂದು ಘನ ರೂಪವನ್ನು ಅಡಗಿಸಲು ೨೬ ಘನರೂಪಗಳು ಬೇಕಾಗುತ್ತವೆ. ಆಗ ಅದು ೩ರ ಘನ ಇಪ್ಪತ್ತೇಳು ಆಗುತ್ತದೆ. ೨೭+೩೭ ಘನರೂಪಗಳನ್ನು ಕೂಡಿಸಿದಾಗ ಅದು ೬೪ ಆಗಿ, ೪ರ ಘನರೂಪ ತಾಳುತ್ತದೆ. ಯಾವುದೇ ಘನರೂಪವಿರಲಿ ಅದರ ಸ್ವರೂಪ ಒಂದೇ ಇರುತ್ತದೆ. ೬ ಮಗ್ಗಲು+೮ ಮೂಲೆ+೧೨ ಸಂಬಂಧ ರೇಖೆಗಳು ಒಟ್ಟು ೬+೮+೧೨=೨೬+೧=೨೭. ಈ ಲಕ್ಷಣ ಅಣು ಹಾಗೂ ಮಹತ್‌ನಲ್ಲಿ ಒಂದೇ ಬಗೆಯದಾಗಿರುತ್ತದೆ. ೩೬ ಹಾಗೂ ೬೩ ಈ ಸಂಖ್ಯೆಗಳು ಹಗೆ ಹಾಗೂ ಗೆಳೆತನ ಸೂಚಿಸುತ್ತವೆ. ೩೬ ರಲ್ಲಿ ೩ ಮತ್ತು ೬ ಬೆನ್ನಿಗೆ ಬೆನ್ನು ಹಚ್ಚಿದ್ದರಿಂದ ವೈರದ ಸಂಕೇತ. ೬೩ರಲ್ಲಿ ೬ ಮತ್ತು ೩ ಎದುರುಬದುರಾಗಿದ್ದರಿಂದ ಸ್ನೇಹದ ಸಂಕೇತ. ಈ ಸ್ವರೂಪ ಅಣು ಹಾಗೂ ಮಹತ್‌ನಲ್ಲಿ ಬದಲಾವಣೆ ಹೊಂದುವದಿಲ್ಲ.

ಶೂನ್ಯದ ಹಿಂದಿನ ಒಂದು, ಹತ್ತರ ಸೂಚಕ. ಇದರ ಮುಂದೆ ಬರುವ ಪ್ರತಿಯೊಂದು ಶೂನ್ಯ ಅದರ ಬೆಲೆಯನ್ನು ಬೆಳೆಸುತ್ತ ಹೋಗುತ್ತದೆ. ಹತ್ತು ಇದು ಅಣುಲಕ್ಷಣ; ಸಾವಿರ ಇದು ಮಹತ್ತಿನ ಲಕ್ಷಣ. ಒಳಗೆ ಇದ್ದ ಅಗಸ್ತ್ಯ ಮತ್ತು ಹೊರಗೆ ಪುಲಸ್ತ್ಯ - ಅಗಸ್ತ್ಯ ಮತ್ತು ಪುಲಸ್ತ್ಯ ಮೂಲತಃ ಒಂದೇ ವಂಶದವರು. ಸಪ್ತರ್ಷಿಗಳ ಹೆಸರುಗಳಲ್ಲಿ ಪುಲಸ್ತ್ಯ, ಪುಲಹ, ಕ್ರತುಗಳ ಹೆಸರುಗಳು ಅಗಸ್ತ್ಯರ ಜೊತೆಯಲ್ಲಿ ಮೊದಲು ಇದ್ದವು. ಮುಂದೆ ಕ್ರಮೇಣ ಅವು ಬಿಟ್ಟು ಹೋದವು. ಈ ವಿಷಯ ಮಹಾಭಾರತದ ಶಾಂತಿಪರ್ವದಲ್ಲಿ ಮೋಕ್ಷಧರ್ಮ ವಿವೇಚನೆಯ ಕಾಲಕ್ಕೆ ಬಂದಿದೆ. ಪುಲಹ ವಂಶದಲ್ಲಿ ಯಕ್ಷರು; ಕ್ರತು ವಂಶದಲ್ಲಿ ಕಾರ್ತಿವೀರ್ಯ ಹುಟ್ಟಿ ಲೋಕವಿರುದ್ಧ, ವೇದವಿರುದ್ಧ ಕೃತ್ಯಗಳಲ್ಲಿ ತೊಡಗಿದ್ದರಿಂದ ಪುಲಸ್ತ್ಯಾದಿಗಳು ಹೊರಗಿನವರಾದರು. ಅಗಸ್ತ್ಯರು ಒಳಗೆ ಉಳಿದರು. ಒಳಗಿದ್ದೇ ಸಮಾಜವನ್ನು ಸುಧಾರಿಸಿದವರು ಅಗಸ್ತ್ಯರು. ಅಣು ರೂಪದ ಅವಿಕಸಿತವಾದ ಸಮಾಜವನ್ನು ಮಹತ್-ವಿಕಸಿತ ಸಮಾಜವಾಗಿ ರೂಪಿಸಲು ಹೊರಟವರು ಅಗಸ್ತ್ಯರು. ಪುಲಸ್ತ್ಯಾದಿ ವಂಶದ ರಾವಣಾದಿಗಳು ಮಹತ್ತನ್ನೇ ಅಣುರೂಪ ಮಾಡಲು ಹೊರಟವರು.

# ೬ ತಮ್ಮನೆನೆವ !

೧

ಕಲ್ಲು-ಕಾಗದ ಕಡತಗಳಲಿ ಕಾಲನ ಕಾಲು
ಸಿಕ್ಕು ತೊಳಲಾಡುವಲಿ ಕುಣಿಕೆ ಬಿಡಿಸಿದರಣ್ಣ
ಕರುವನಾಡಿಸಿದಂತೆ ಅದನು ಕುಣಿಸಾಡಿದಿರಿ.
ತಣಿದಿರಿ, ನೀವು ತಣಿಸಿದಿರಿ ಹನಿಸಿದ ಕಣ್ಣ

೨

ವೀರ ಚಿಂತಕ, ನಿಮ್ಮ ಧ್ಯಾನ ಬುದ್ಧಿಗೆ ಗಮ್ಯ
ನಿಮಗೆ ನೀವೇ ಪೂರ್ವಪಕ್ಷ ಅಕ್ಷರ-ರಮ್ಯ
ನಡುಹಾದಿಯಲ್ಲೆ ಬಿಡಬಹುದೆ ಜೋಗಿಯ ಕಂತೆ?
ನಾವು ಬರಬಹುದು ಕನ್ನಡಕೆ! ನೀವೂ ಅಂತೆ.

೩

ಪೈಗೆ ಪೈ ಲೆಕ್ಕ ಒಪ್ಪಿಸಿದಿರಾ? ಗೋವಿಂದ
ಒಪ್ಪಿದನೆ? ನಾ ನೆನೆವೆ ಕಸ್ತೂರಿ ಜವ್ವಾದಿ
ಹೊರಗೆ ಹೊಗೆ ಬೂದಿ, ಒಳಗೊಳಗೆ ಅಗ್ನಿಯ ಹಾದಿ
ನಿಮ್ಮ ಜಿಜ್ಞಾಸೆಗೆಲ್ಲಿದೆ ಮುಗಿವು? ಪದಕಾದಿ?

೪

ಹರಿಸಿದಿರಿ ತರುಣರನು ಆ ಅಸೂಯೆಯೆ ದಗ್ಧ-
ಕಾಲಜ್ಞಾನಿ! ಮುಗ್ಧ! ಅಕ್ಕರಿಗನೇ! ವಿದಗ್ಧ!

---

ಭಾವ : ೧೮೮೩ರಲ್ಲಿ ಜನಿಸಿದ ಗೋವಿಂದ ಪೈ ಅವರಲ್ಲಿಯ ಅಸೂಯಾರಹಿತ ಪಾಂಡಿತ್ಯ ಹಾಗೂ ಚಾತುರ್ಯ ಕುರಿತು ಸುನೀತ.

ಶಬ್ದಾರ್ಥ : ವಿದಗ್ಧ=ವಿಶೇಷವಾಗಿ ಸುಟ್ಟು ಸಿದ್ಧಪಡಿಸಿದ. ಪಾಂಡಿತ್ಯ ಎಂಬ ಅಗ್ನಿಯಲ್ಲಿ ಪಾಕಗೊಂಡ ಚತುರರು, ಸಂಶೋಧಕರು.

## ೭ ದೇವುಡು

೧

ಬಾಲನಂಥ ದೇವುಡು। ಉನ್ಮತ್ತನಂಥ ದೇವುಡು
ಜಡ-ಪಿಶಾಚಿ ದೇವುಡು। ಹುಚ್ಚು ಮರುಳು ದೇವುಡು
ಜೀವನವೇ ನಾಟಕ। ತಾನೂ ಒಬ್ಬ ನೋಟಕ

೨

ಆಟವೋ ಬೂಟಾಟವೋ? ನೋಟವೆಂದ ದೇವುಡು
ಎದ್ದ, ಬಿದ್ದ, ಒದ್ದಾಡಿದ। ಗುದ್ದಾಡಿದ ದೇವುಡು
ಸುತ್ತಾಡಿದ, ಲೆತ್ತಾಡಿದ। ಕಿತ್ತಾಡಿದ ದೇವುಡು
ಕುಂಟುಗಾಲಿನಿಂದ ಹೊರಟ। ವೈಕುಂಠಕೆ ದೇವುಡು
ಕುರುಡುಗಣ್ಣಿನಿಂದ ಕಂಡ। ಕೈಲಾಸವ ದೇವುಡು
ವೇದತೀರ್ಥ, ಬುಡ್ಡನಗಿರಿ। ಬಾಳಕದಳಿ ಕರೆವುದು
ಅರ್ಥಮರ್ಥ ಎಲ್ಲ ಕೆಲಸ। ಬರಬೇಕು ದೇವುಡು

೩

ದೇವರನ್ನು ಮರೆಯದಂತೆ। ಗುರುವಿನಲ್ಲಿ ಬೆರೆಯುವಂತೆ
ವಿನಯದಲ್ಲಿ ಮೆರೆಯುವಂತೆ। ಬರಬೇಕು ದೇವುಡು
ಎಲ್ಲ ಕ್ಷೇಮ, ಎಲ್ಲ ಯೋಗ। ಇಂದ್ರಭೋಗ ದೇವುಡು
ಏನಕೇನ ಬರುವುದೇನೋ। ಮೇನಕಾಪತಿತ್ವವು?
ಗಾಯತ್ರಿಯ ಗಾತ್ರವೆಲ್ಲಿ। ಶಕುಂತಲಾ ಸತೀತ್ವವು

೪

ಭಿಕ್ಷಾಟನ ಚರಿತೆ ಉಂಟು। ಶಂಕರನಿಗು ರುದ್ರಗೂ
ವಿರಹಯೋಗ ವಿರಹಭೋಗ। ತಪ್ಪಲಿಲ್ಲ ಗೌರಿಗೂ

೫

ಅವತರಣಕೆ ಉದ್ಧರಣಕೆ। ಸೋಪಾನವು ಜೀವನ
ಕ್ರೋಧ, ಶಾಪ, ದೇವತಾಪ। ಎಲ್ಲ ತಪವು ಪಾವನ
ಅರಿವುದೇನು? ಮರೆವುದೇನು? ಲೀಲೆಗುಂಟು ಕಾಲವು
ಈಸಿಸುವುದು ಮುಳುಗಿಸುವುದು। ಅದು ಮಾಯಾಜಾಲವು

೬

ನಹುಷ, ಯಾಜ್ಞವಲ್ಕ್ಯನಲ್ಲಿ ಸುಮಿತ್ರಾಣಿ ದೇವುಡು
ಬ್ರಹ್ಮ-ಕ್ಷತ್ರ, ಕುರುಕ್ಷೇತ್ರ। ಅದು ಪವಿತ್ರ ದೇವುಡು
ಸ್ತಂಭದಲ್ಲು ಬಿಂಬವಿದೆ। ನಂಬಬಹುದು ದೇವುಡು
ಕುಂಭ ಬರಿದು ಎಂದರೇನು। ಬಯಲು ಬರಿದೆ? ದೇವುಡು.

---

ಭಾವ : ದೇವುಡು ಅವರೊಂದಿಗಿದ್ದ ಬೇಂದ್ರೆ ಹಾರ್ದಿಕ ಸಂಬಂಧದ ತಂತಿಯ ಮಿಡಿತ. ದೇವುಡು ಹುಟ್ಟಿದ್ದು ೧೮೯೬.

ವಿಶೇಷ : ಬೇಂದ್ರೆ ಪ್ರವಾಸದಲ್ಲಿದ್ದಾಗ ಮಾಡಿದ ರಚನೆ. ಕುಸುಗಲ್ಲ ರೇಲ್ವೆ ನಿಲ್ದಾಣದಲ್ಲಿ ಪ್ರಾರಂಭಿಸಿ, ಹುಬ್ಬಳ್ಳಿ ನಿಲ್ದಾಣಕ್ಕೆ ಮುಗಿಸಿದ್ದು.

# ೮ ಶ್ರೀ ವಿವೇಕಾನಂದ ಶಿಖರ-ಪ್ರಗಾಥಾ

೧

ಗೌರಿಶಂಕರ ಇತ್ತ! ಇತ್ತ ಕಾಂಚನಗಂಗೆ! ಅತ್ತತ್ತ ಪರಮಹಂಸರ ಸವಾರಿ
ಆತ್ಮಕ್ರೀಡಃ, ಆತ್ಮರತಿಃ, ಸಚ್ಚಿದಾತ್ಮವಿಹಾರಿ, ಹೆಜ್ಜೆಮೂಡದ ದಾರಿ
ಅದೋ! ವಿವೇಕಾನಂದ ನೀಡಿದನು ದಾರಿ, ಉದಾರಿ! ಶಿಖರದಿಂ ಶಿಖರಕ್ಕೆ ಹಾರಿ
ಈ ಹಾದಿ, ಅನಾದಿ, ಹೃದಯ ಸಂವಾದಿ
ಸುನಾದಿ, ಸರಿಗಮು ಸನಾದಿ, ವಿಜ್ಞಾನ-ಬೋಧಿ
ಸಂಜ್ಞಾನ-ಸಂಬೋಧಿಃ
"ಸಹವೀರ್ಯಂ ಕರವಾವಹೈ
ತೇಜಸ್ವಿನಾವಧೀತಮಸ್ತು ಮಾವಿದ್ವಿಷಾವಹೈ"
"ಸಮಾನಿ ವ ಆಕೂತಿಃ। ಸಮಾನಾ ಹೃದಯಾನಿವಃ"
ನಿಃ ಪಕ್ಷ ವೇದಾಂತ, ಪೂರ್ಣ ಬೋಧಾಂತ; ಇದು ಸ್ವಯಂ ಸಿದ್ಧಾಂತ
ಪರಮಾಮೃತಾಂಬೋಧಿ.

೨

"ನಂದಿ ನಾನು। ಆ-। ನಂದಿ ನಾನು। ಆ ಋಷಭಧ್ವಜ, ಎತ್ತೊ
ಬಂದೆ ನಾ ಶಿವಶಕ್ತಿಯ ಹೊತ್ತು"
ಎತ್ತೋ? ಎತ್ತು ಅಲ್ಲ ಇದು - ಹಂಡಹೋರಿ! ತಾ। ಮುಗದಾಣವ ಮೀರಿ
ನಂದಿ ಕೋಲದಲಿ, ಮಂದಿ ಮಂದಿ ತುರುಮಂದಿ ಸಂಧಿ, ಸಂಧೀ
ಮುಕ್ತರ ಸಂಬಂಧೀ.
ಆ-ವಿವೇಕ ಲಹರಿ ಅದು, ಪ್ರತಿ ಪ್ರಹರಿ, ಪ್ರಹರೀ
ಗಳಿಗೆ ಗಳಿಗೆ ಘಟ ಘಟ ಪ್ರಸ್ತರೀ, ಇದು ಮಲಾಪಹಾರೀ
ನಂದ ಕಂಬ ಲಹರೀ! ಸ್ಕಂದ ಶಿಲಾಲಹರೀ। ಸ್ವಾನಂದ ಲಹರಿ।
ನಿಃಸ್ವಾನಂದ ಲಹರಿ।

೩
ಒಗಟಿ ರೆಂಡಿನಲಿ ಮೂಡುತಿದ್ದೆ, ನಾ ಮುಳುಗುತಿದ್ದೆ, ನಿದ್ದೆ
ನಿದ್ದೆ-ಸ್ವಪ್ನಹಾರಿ
ನಲಿವು ನನ್ನಿಯಲಿ, ಒಲಿವ ಸನ್ನಿಯಲಿ ರಂಗ ರಂಗ ಹೂಡಿ
ಶ್ರೀರಂಗದಲಿ, ಪಾಂಡುರಂಗದಲಿ, ನಾಲ್ಕರ ನುಡಿ ಹಾಡಿ
ಮೌನ ಮುದ್ರೆ ಒತ್ತಿ, ಶ್ರೀಚರಣಕ್ಕೆತ್ತಿ
ಋಭುವು ಇದ್ದೆ, ಆ ಭೂ ಎಂದು ನಾ ಪ್ರಭುವೂ ಆಗಿದ್ದೆ
ವಿಭುವು ಆಗಿ, ಸಂಭವಿಸಲಿದ್ದೆ ಹೋ! ಅತಿ ಭೂಮಿಗೆ ಪ್ರತಿ
ನಾ ಉದ್ಭವಿಸಿದ್ದೆ.
ನರ-ನಾರಾಯಣರಾ ವಿದ್ಯೆ ಶೃಂಗೇರಿಯ ಅಂಗಾಂಗದಲಿಽಽ
ಶ್ರೀಶೈಲವನೂ ಮುಟ್ಟಿದ್ದೆ, ಕಲ್ಯಾಣವನೂ ಕಟ್ಟಿದ್ದೆ
ತಿರುಮಲೆಯನ್ನೂ ಮುಟ್ಟಿದ್ದೆ, ಉಡುಪಿಯನ್ನು ನಾ ಕಟ್ಟಿದ್ದೆ
ಹೃದಯದಳಂದೆಯ ಮುಟ್ಟಿದ್ದೆ, ಪಂಢರಾಪುರಾ ಕಟ್ಟಿದ್ದೆ
ಭರತಖಂಡದಾ ಉತ್ತರವನ್ನು, ಧ್ರುವಮಂಡಲದಾ ಎತ್ತರವನ್ನು
ಗೊಮ್ಮಟನಾಗಿ ತಟ್ಟಿದ್ದೆ.
ಕನ್ಯಾಕುಮಾರಿಯಲಿ ಮುಳುಗಿದ್ದೆ-। ಕಾಶ್ಮೀರದ ಒಳಗಿದ್ದೆ। ಶ್ರೀ-
ಗುರುವಿನ ಬಳಿಗಿದ್ದೆ
ನಂದಿ ನಾನು! ಆ-। ನಂದಿ ನಾನು, ಆ ಋಷಭಧ್ವಜ ಎತ್ತೂ
ಬಂದೆ ನಾ ಶಿವಶಕ್ತಿಯ ಹೊತ್ತು.
೪
ಸ್ವಯಂಭೂ, ಸ್ವಯಂಭೂ, ಸ್ವಯಂಭೂ ಹೇ
ಪರಿಭಾವಿಸೆ ಕವಿ-ಮನೀಷಿಯೋ
ಈಶಾವಾಸಕೆ ಶೇಷನು ಆಗಿ। ಬಲರಾಮನೊಳೇ ಅಭಯವು ಮಾಗಿ
ಫಡಫಡಿಸುತ್ತ ಅಗ್ನಿಜ್ವಾಲೆ! ಶ್ರೀಕಂಠದ ಶಂಖಿಕ್ಕನುಕೂಲೆ
ಓಂ, ಓಂ, ಅಂ, ಅಃ ಸೋಹಂ ಹಂಸಃ
ಬ್ರಹ್ಮರಂಧ್ರದಲಿ, ಸಹಸ್ರಾರದಲಿ, ಮಾತೆಯ ಘೋಷದ ಸಂತೋಷ
ಆ ಆ ಆ ನಂದಿ। ಊರ್ಧ್ವಗತಿಯ ಹೊಂದಿ
ಈಯೆ ಕಾಮಧೇನು! ನಂದಿಯಾದೆ ನಾನು
ಚಿಂತಾಮಣಿಗೋ ಹಣೆ ತಿಕ್ಕಿದ್ದೆ
ಕಲ್ಪವೃಕ್ಷಗಳ ಬನ ಹೊಕ್ಕಿದ್ದೆ
ಅಪ್ಸರೆಯರ ವೃಂದದಿ ಸಿಕ್ಕಿದ್ದೆ
'ಶ್ರೀ ಗುರುವೇ ಶರಣು ಎಂದೆ' ಆ ಹಿಮಾಲಯಕೆ ಬಂದೆ
ಉಮಾ-ಯಕ್ಷಿಯೂ ಸಾಕ್ಷಿಯಾಗಿ। ಆ। ಶ್ರಮದೊಳಗಿಂಗಿದ್ದೆ
ನದಿಯಹಾಗೆ ತಾ ನಿನದಿಸುವುದು ಆ ದಿವ್ಯಧ್ವನಿ ಕೇಳಿ। ಏಳಿ, ಏಳಿ, ಏಳಿ
ಎತ್ತರಕೇಳೀ, ಉತ್ತರಕೇಳೀ. ಆ ಬಿತ್ತರ ಕೇಳೀ.

೫

ಅಹಂ ಎಂದು ನಾ ಉರಿಯುತಿದ್ದೆ। ನಂದಿ ನಾನು ಆಗರಿಯುತಿದ್ದೆ
ಆನಂದೀ। ಆನಂದೀ –
ಶಿವನಿಲ್ಲದಾ ಆ ಶಕ್ತಿ ಯಾವುದೋ?। ಭಗವನ್ಮಹಿಮೆಯೆ ಭಕ್ತಿ ಈವುದೋ ?
ದೇಹದಲ್ಲೆ ನಿಃಸಂದೇಹಿಯು ನಾ
ದೇಹಲಿ ದೀಪದ ಸುಸ್ನೇಹಿಯು ನಾ
ಬತ್ತಿಯಾದೆ! ಈ -। ಬತ್ತಿಯಾದೆ! ಹೂ-। ಬತ್ತಿಯಾದೆ ನಾ
ನಂದಾದೀಪದ ಕುಡಿ। ನಿರ್ವಾಣದ ಕೈಪಿಡಿ.
ಉರಿ, ಉರಿ, ಉರಿ, ದಿಕ್ಕರೀ
ಶೇಷ ಫಣಾ ಮಂಡಲ ಸಂಚಾರಿ। ಕೂರ್ಮದ ಬೆನ್ನಲಿ ಕುಣಿಯುವ ನಾರಿ
ಯಾರೀಕೆ ? ಯಾರೀಕೆ ? ಹಂಸನ ಹಾರಿಕೆ। ಶುಕನ ಸಾರಿಕೆ
ಬಾಂಬೊಳೆಯೊಳು ಹೊಳೆಯುವ ನೀಹಾರಿಕೆ
ಭಕ್ತಿ-ಹೃದಯ ಕುವಲಯ ಸುವಿಹಾರೀ। ರಾಸಲೀಲೆಯಲಿ-
ಮೆಟ್ಟುವ ಚಾರಿ.
ಬಾರಿ ಬಾರಿ, ಅವತಾರಿಯಾಗಿ। ಉದ್ಧಾರಕೆ ಇದು ದಾರಿ
ಸೋಪಾನ ಕಟ್ಟಿ, ಹೊಕ್ಕರಣೆ ಹೊಕ್ಕು, ಹೃತ್ ಪುಂಡರೀಕ ಸೇರಿ
ಅರಳಿಸುವ ಪ್ರಭಾತದ 'ಫೇರಿ'.
ಭೃಂಗ ಭೃಂಗಗಳ ಗುಂಗಿನಲ್ಲಿ, ತಂಗಿರುವೀ ಪ್ರವಿವೇಕೀ
ಶ್ರೀರಾಮಕೃಷ್ಣ ಹರಿ, ರಾಮಕೃಷ್ಣ ಹರಿ; ಬಿಲಹರಿ ಸಾವೇರೀ
ಕಾವೇರಿ ಅಸಾವೇರೀ.
ನಿರ್ವಿತರ್ಕ ಮೀರಿ, ನಿರ್ವಿಚಾರ ಸೂರಿ, ಅಸ್ಮಿತಾನುಸಾರೀ (ಆನಂದ ಲಹರಿ)
ಕಂಠಸೂತ್ರಕಾರಿ, ಓಲೆ ತಂದ ಭಾರಿ
ಶಾರದಾಮಣೀ-ಕಂ। ಕಣಣ ಝಣತ್ಕಾರಿ। ಕುಂಕುಮಿತ
ಪತಾಕಾಚಾಽರೀ
ಶ್ರೀ ರಾಮಕೃಷ್ಣ ಹರಿ, ರಾಮಕೃಷ್ಣ ಹರಿ
ಓಂ। ಗಮಿತ ನಿರಾಧಾರೀ

೬

ಮೊನ್ನೆ ಮೊನ್ನೆ ಇದ್ದ, ಪಂಚಾಗ್ನಿ ಸಿದ್ಧ, ಸಭ್ಯತೆಗೇ ಇವ ಬದ್ಧ
'ಓಂ ಭವತಿ' ಎಂದಾ ಸಾರಿ
ವಾ। ನವತೆಯ ವ್ಯೆಸೇರೀ। ಪರಾಕು। ದೈವದ ಪಡಿಹಾರೀ.
ಓಂ ತತ್ ಗತ್ತಿನಲಿ ನಡೆದನು ಸಂನ್ಯಾಸಿ
ನವಯುಗದ ಹಡದಿ ಹಾಸೀ
ಸ್ವಚ್ಛಂದ ಉಪನ್ಯಾಸೀ !
''ಸಂಗಚ್ಛಧ್ವಂ ಸಂವದಧ್ವಂ ಸಂವೋಮನಾಂಸಿ ಜಾನತಾಂ
ದೇವಾಭಾಗಂ ಯಥಾ ಪೂರ್ವೇ ಸಂಜಾನಾನಾ ಉಪಾಸತೇ''
ಇದು ವೃಷೋ ಧರ್ಮ, ಅಧಿಯಜ್ಞಕರ್ಮ
ಇದು ಶಾಂತವೀರ-ಗಾಥಾ। ಪ್ರಗಾಥಾ-। ದಂಡಕಾನುಕಾರೀ
ಸದು ಹೃದಯ ಹಾರಿ-। ಸಂವಿತ್ ಚಕೋರಿ। ಇದು ಸಾಮು ಏಕತಾರಿ.
ಓಂ ಮನನ ತನನ ಶ್ರೀ ಗುರುಧ್ಯಾನಾ। ಅಂಬಿಕಾತನಯ ತಾನಾ
ಇದಕೇನಿದೆ ಅನುಮಾನಾ ?
ಎದೆ ಉಸಿರ ತುತ್ತು ಮೂರೂ ಹೊತ್ತು
ಆನಂದಿ ನಾನು, ಆನಂದಿ ನಾನು ಆ ವೃಷಭಧ್ವಜ ಎತ್ತು
ಬಂದೆ ನಾ ಶಿವಶಕ್ತಿಯ ಹೊತ್ತು
ಈ ಹೊತ್ತು.

---

ಭಾವ : ಶ್ರೀ ವಿವೇಕಾನಂದರ ಕಾಲ-೧೮೬೩-೧೯೦೨. ಈ ಪ್ರಗಾಥವು ಶ್ರೀ ವಿವೇಕಾನಂದರಿಗೆ ಅರ್ಪಿಸಿದ ಶ್ರದ್ಧಾಂಜಲಿ. ಅವರ ಚಾರಿತ್ರ್ಯದಿಂದ ಬಂದ ಆನಂದಲಹರಿ ಇದು.

ಶಬ್ದಾರ್ಥ : ತುರುಮಂದಿ=ಆಕಳ ಹಿಂಡು, ಗೋಪಾಲಕರ ಸಮೂಹ, ದನಗಾಹಿಗಳು. ಪ್ರಹರಿ=೩ ಗಂಟೆಗಳ ಅವಧಿ. ಋಭು=ದೇವತಾ ಸಮೂಹ. ಅಳಂದೆ-ಅಳಿಗೆ=ನೀರು ಅಥವಾ ಕಾಳು ತುಂಬುವ ಮಣ್ಣಿನ ಪಾತ್ರೆ, ಕುಂಭ, ಕೊಡ. ಮನೀಷಿ=ಕವಿ, ಮನೀಷಿ, ಸ್ವಯಂಭೂ, ಪರಿಭೂ ಇವು ಈಶಾವಾಸ್ಯ ಉಪನಿಷತ್ ಶಬ್ದಗ್ಳು. ಕವಿ, ಸ್ವಯಂಭೂ, ಪರಿಭೂ ಸ್ಥಿತಿಯನ್ನು ದಾಟಿ ಉತ್ಕ್ರಾಂತಿಯ ಕಾಲಕ್ಕೆ ಮನೀಷಿಯಾಗುತ್ತಾನೆ. ನೀಹಾರಿಕೆ=ಬೆಳಕಿನ ಪುಂಜ, ಸೌರವ್ಯೂಹದಿಂದಾಚೆಗಿರುವ ದೂರ, ನಕ್ಷತ್ರಪುಂಜಗಳಿಂದಾಗಲಿ, ಅನಿಲ ದ್ರವ್ಯ ಅಥವಾ ನಕ್ಷತ್ರ ದ್ರವ್ಯದಿಂದಾಗಲಿ ಆದ ಆಕಾಶದ ಕಾಂತಿ ಪ್ರದೇಶ, ಜ್ಯೋತಿರ್ಮೇಘ. ಪಡಿಹಾರೀ=ದ್ವಾರಪಾಲಕ. ಬಿಲಹರಿ, ಸಾವೇರಿ=ಬಿಲಹರಿ, ಅಸಾವೇರಿ ಇವು ಕರ್ನಾಟಕ ಸಂಗೀತದಲ್ಲಿ ಪ್ರಾತಃಕಾಲದ ರಾಗಗಳು. ಒಗಟಿ, ರೆಂಡು, ಮೂಡು=ತೆಲುಗಿನಲ್ಲಿ ಒಂದು, ಎರಡು, ಮೂರು.

ವಿಶೇಷ : ಟಾಮಿ ಥಾಮಪ್ಸನ್ ಇವರ ''ದಿ ಎ ಬಿ ಸಿ ಆಫ್ ಅವರ್ ಆಲ್ಫಬೆಟ್'' ಕೃತಿಯನ್ನು ಅಭ್ಯಸಿಸುವಾಗ ಬೇಂದ್ರೆಯವರು ಈ ಕೃತಿಯ ಪುಟ ೭ರಲ್ಲಿ "The Great Epics" ಎಂಬ ಪ್ರಯೋಗವನ್ನು ಗುರುತು ಹಾಕಿ, ಅದಕ್ಕೆ ''ಪ್ರಗಾಥ'' ಎಂದು ಟಿಪ್ಪಣಿಯನ್ನು ಹಾಕಿರುವುದು ಅತ್ಯಂತ ಗಮನಾರ್ಹ.

## ೯ ಪಾಲಿಗೆ ಬಂದದ್ದು

೧

‘ಬೇಂದ್ರೇ’ನ ಗೋಳು-ಅದು ಹೋಳು ಹೋಳು;
ಪಡುವದಷ್ಟೂ ಪಾಡು ಆಗಲಿಲ್ಲ.
ಹಸಿರಿನಲೆ ಒಣಗಿದ್ದು ಕೊಳಕಾಗಿ ಗೊಣಗಿದ್ದು
ತಿಂಡಿಯಲಿ ತೀರಿದ್ದು ಒಗರು ಹುಳಿಯು
ಕಸವು ಕೂಡಾ ರಸವು
ರಸಪಾಕ ಹಸಿಬಿಸಿಯು
ಪಿಂಡ ಮೂರ್ತಿಸಿದಷ್ಟು ಕಂಡ ಕಾಣ್ಕೆ.
ಉಳಿದ ಉಸಿರಾಟವೋ ಹುಸಿದ ಹೂಣ್ಕೆ
ಹುಂಕಾರ, ಠಂಕಾರ, ಶಂಖಕ್ಕೆ ಶಂಖ
[ನಿಃಶಂಕನಲ್ಲಿ ಬೇಕಾಗಿಲ್ಲ ಬಿಂಕ]
ಸುತ್ತುಮುತ್ತಿನ ಕಾವು, ಚಳಿಗೆ
ಅಂಕಡೊಂಕ

೨

ನನ್ನ ಮಂಡಲದಲ್ಲೆ ನನ್ನ ಅಂಡಲೆದಾಟ
ಹೊರಗಿನದು ಕಾಟ-ಮಾಟ
ಬೇಟವೋ ಕೂಟವೋ ಪಾಟಾಗಿ ಸುರಿದದ್ದು
ಅಗ್ಗವಣಿ-ಕಣ್ಣಮಣಿ
ಗುಣಿಸಿದ ಗುಣಾಕಾರ, ಭಾಜ್ಯ, ಭಾಗ್ಯ
ಉಂಡಿದ್ದು ಭೋಗ್ಯ
ಬಿಟ್ಟ ಎಂಜಲುರಾಶಿ, ಸುಪರ-ಮುಪರ ವೈರಾಗ್ಯ.

---

ಭಾವ : ಬೇಂದ್ರೆನನ್ನು ಹುಡುಕಾಡಬೇಕೆಂದು ತಡಕಾಡುವವರೊಡನೆ ಅಂಬಿಕಾತನಯದತ್ತ ಸಹಾನುಭೂತಿಯಿ
ಉತ್ತರಿಸಿದ ಒಂದು ರೀತಿ.

ಶಬ್ದಾರ್ಥ : ಪಾಡು=ಪಕ್ವತೆ. ಹೂಣ್ಕೆ-ಪೂಣ್ಕೆ=ಶಪಥ, ಪ್ರತಿಜ್ಞೆ. ಅಂಕಡೊಂಕ=ವಕ್ರ. ಅಂಡಲೆದಾಟ=ಸುತ್ತಾ
ಸಂಚಾರ. ಪಾಟ=ಪ್ರವಾಹ. ಅಗ್ಗವಣಿ=ನೀರು. ಸುಪರ-ಮುಪುರ=ಮೇಲಮೇಲಿನತೋರಿಕೆ.

# ೧೦ ಅಹಂ ಇದಂ

೧
ಎಲಎಲಾ ಎಂಥದೀ ಕನ್ನಡಿಯು!
ನನ್ನ ಮುಖವೆತ್ತ? ಈ ಪ್ರತಿಬಿಂಬವೆತ್ತ?
೨
ಇದಿರಿಗಿದು ಮುಖವೊ...
ಚಹರೆಪಟ್ಟಿಯ ಚೇಷ್ಟೆ!
೩
ಉರುಟುಗೂದಲು, ಒರಟೊರಟು ಬೆರಟು ತಲೆ,
ಹಣೆತುಂಬ ತುಂಡು ಗೆರೆ
ಹುಬ್ಬು ಹರಕು ಹರಕು
ಹೊಗೆ ಮುಸುಕು ಕಣ್ಣಿನಲಿ ಬೆಂಕಿ ಇರಬಹುದು
ಮೀಸೆಯು ಬಟಾಬಯಲು, ಓಹೋ, ಇಲ್ಲಿದೆ ಮೂಗು
ದಪ್ಪ ತುಟಿ, ಚಾಚು ತುಟಿ, ಕಚ್ಚು ತುಟಿ
ಗದ್ದ ಮುದ್ದಾಗಿಲ್ಲ, ಬರಿ ಮುದ್ದೆ.
೪
ಇದು ಯಾವ ಮುದ್ರೆಯ ವಿದ್ಯೆ?
ಇದು ನನ್ನ ಮುಖವೇ?
ರಾವುಗನ್ನಡಿಯಲ್ಲಿ ಭೂತಚೇಷ್ಟೆಯೆ ಬೇಕೆ?
ಹೌದು, ನಾ ಕಂಡ ನನ್ನ ಮುಖ ನೆರಳಿನಲ್ಲಿಯೆ ಮಾತ್ರ
ಆದರೂ, ಆ ಮುಖಕು ಈ ಮುಖಕು
ಅಜಗಜಾಂತರ ಸಾಮ್ಯ
೫
'ನನ್ನದದು ಮುಖ? ಹೌದು!
ಹಾಗಾದರೆ, ಇದು ಮುಖವೇ ಅಲ್ಲ!'
ಇದಿರು ಮುಖದಿಂದಲೂ ಬಂತು ಅಂತೇ ಸದ್ದು.

೬
ಪ್ರತಿಬಿಂಬದಿಂದ ಬಂತೇ ಪ್ರತಿಧ್ವನಿಯು?
ಟಗರು ಟಗರಾಟದಲಿ, ಅಹಮಹಮ್ಮಿಗೆ ಇದಿರು
ವ್ಯಕ್ತಿ ವ್ಯಕ್ತಿಗೆ ಎದುರು.
೭
ಸೂಕ್ತಿಗೋ ಇದೆ ಕ್ಷಾಮ
ಬಡಿಗೆ ಬಡಿದಾಟಕ್ಕು, ಬಾಯ್ಗೆ ಬಾಯೇ ಕ್ಷೇಮ.

---

ಭಾವ : ಬೇಂದ್ರೆಯವರ ಸ್ವವಿಮರ್ಶೆ.

ಶಬ್ದಾರ್ಥ : ಬೆರಟು-ಬೆರಂಟು=ಉಗುರಿನಿಂದ ಕೆದಕು. ಟಗರಾಟ=ಗಂಡು ಕುರಿಗಳ ಹೋರಾಟ.



# ೧೧ ಮಾತು ಕೃತಿ

೧

ಮಾತು ಮಾತಿನ ಧಿಕ್ಕಿಯಲ್ಲಿ ಮಾತಿನ ಬೂದಿ
ಮನಮನದ ಮಥನ ಮನ್ಮಥನ ನಿರ್ವಾಣಗತಿ
ಕೇಳಿಸುವ ಮಂತ್ರಗಳಿಗಾವುದೋ ತುಂಬು ತುದಿ
ತುಂಬುರನೆ ನಿದ್ರಿಸಿರೆ ತಂಬೂರಿಗಾರು ಜತಿ?

೨

ಸ್ಪರ್ಶದಿಂದೆಚ್ಚೆತ್ತ ದರ್ಶನದ ಬೆಳಕಿನಲಿ
ಕಂಡೆ, ನಾದದ ಹಾದಿ, ಮರಣಗಳ ತವರು, ನಿಧಿ.
ನಕ್ಷತ್ರ ದೃಷ್ಟಿಗೋಚರವೆ ಕಣ್ ಪಿಳುಕಿನಲಿ?
ಆ ತಿರೋಭಾವಕ್ಕು ತಪ್ಪದು ಅನುಗ್ರಹದ ವಿಧಿ.

೩

ಯಜ್ಞ ಪ್ರಾಜಾಪತ್ಯ; ಬ್ರಹ್ಮ ಸುಮ್ನಸ್ಪಂದ
ದೇವಮಾನವ ಮಾರ್ಗದಲ್ಲೆ ದೇಸೀ ರೀತಿ;
ದಾಯಾದಿತನದಲ್ಲೆ ಬಂಧುಭಾವದ ಬಂಧ;
ಭಗವಂತ ಹೃದಯದಲಿ ಭಕ್ತಿ ಹಾಡಿದ ಗೀತಿ.

೪

ನಾದವೇನಾದೀತು? ಸ್ಫೂರ್ತಿ ಏನ್ನಾದೀತು?
ಶಬ್ದ ಶ್ರುತಿಯಾದಾಗ, ಮಾತು ಕೃತಿಯಾದೀತು.

---

ಭಾವ : ಬೇಂದ್ರೆಯವರ ಭಾವ ಹಾಗೂ ಬುದ್ಧಿ ಅಂಬಿಕಾತನಯದತ್ತರ ಬಾಂಧವ್ಯದ ಕಸೂತಿಯ ಕುಶಲ ಕರ್ಮದ ಪ್ರಜ್ಞೆಯಾಗಿದೆ. ನಾದವನ್ನು ನಾದುವದು ಮತ್ತು ಸ್ಫೂರ್ತಿಯನ್ನು ನಾದುವದಕ್ಕಿಂತ ಮಿಕ್ಕಿ ಬಂದ ಶಬ್ದ ಶ್ರುತಿಯಾದಾಗ ಆ ಮಾತು ಕಾವ್ಯ-ಕೃತಿಯಾಗುತ್ತದೆ ಎಂಬ ಕಾವ್ಯೋದ್ಯೋಗ ಸಿದ್ಧಾಂತ ಇಲ್ಲಿದೆ.

ಶಬ್ದಾರ್ಥ : ತುಂಬುರು=ಒಬ್ಬ ಗಂಧರ್ವ. ತಿರೋಭಾವ=ರಹಸ್ಯವಾದ ಇರುವಿಕೆ.

# ೧೨ ನಾದ ಮಯೂರ

೧
ಬೆಳಕನ್ನೆ ಮುಸಿಮಾಡಿ ಎರೆದ ಮಿಂಚಿನ ಚಿತ್ರ
ಬೆಡಗಿನಲಿ ಮಡಗಿರಿಸಿ ಮುಗಿಸದಿರು ಆತುರದೆ;
ಅರೆದಾಳ ಹಚ್ಚಿದರು ವಚನ ಒಳಗಡಗಿರದೆ?
ಪ್ರಜ್ಞೆ ಪ್ರತಿಭಾಪುಷ್ಪ, ಸಂಜ್ಞೆ ಕಾಂಚನಪತ್ರ!
೨
ಪ್ರಸ್ಫುರಕ ದೀಪ್ತಿ ಝಗಮಗಿಸಿ ತೆರೆವುದು ಕಣ್ಣ
ಏಳು ನಾಲಗೆ ಚಾಚಿ ಬೆಂಕಿ ತಲೆ ಅಲರಲರ
ಯಾಕಣ್ಣ ಅದ್ದುವದು ಕುಂಚ-ನೀರಿನ ಬಣ್ಣ?
ಮಣ್ಣೆ ಕಂಪಿಡುವಾಗ ಮೂಸುವರೆ ಹುಸಿ ಎಲರ?
೩
ಕವಿಯ ಗವಿ ಹೊಕ್ಕು ಮೌನದ ಆಳದಲಿ ಮುನಿಯು
ಮುಚುಕುಂದ ನಿದ್ರೆಯಲಿ ಭದ್ರವಾದರು ಏನು?
ಗ್ರಹಗೋಲ ಸಂಗೀತ ತಾನ ತಾನದ ನನೆಯು
ಭಾವದ ಪರಿಸ್ಪಂದ ಆತ್ಮ ಆತ್ಮವೆ ತಾನು.
೪
ವಾಚ್ಯ ವರ್ಣಗಳಲ್ಲಿ ನವಿರು ನವಿಲಿನ ಕೇಕೆ?
ಶ್ರೀ ಅನಿರ್ವಾಚ್ಯಕ್ಕೆ ಬೇರೆ ಭಾಷ್ಯವು ಬೇಕೆ?

---

ಭಾವ : ಒಂದು ರೂಪಕ ಕವನ. ಕವನ ಸೃಷ್ಟಿಯ ಮೊದಲು ಶ್ರುತಿಯಾಗಿ ಕೇಳಿಸುವ ಆ ಕವನದ ನಡಿಗೆ,ಛಂದದ ಅನುಭವದ ಅಭಿವ್ಯಕ್ತಿ.

ಶಬ್ದಾರ್ಥ : ಮುಸಿ=ಲೋಹವನ್ನು ಕರಗಿಸುವ ಬಟ್ಟಲು, ಮೂಸೆ. ಎಲರ=ಗಾಳಿ. ಮುಚಕುಂದ ನಿದ್ರೆ=ದ್ವಾಪರ ಯುಗ ಮುಗಿಯುವ ವರೆಗೆ ನಿದ್ದೆ ಮಾಡುವ ವ್ಯಕ್ತಿ. ನವಿರು=ರೋಮಾಂಚನ. ಪ್ರಸ್ಫುರಕ=Phosphorus=ಜ್ವಾಲಾಗ್ರಾಹಿ ಹಳದಿ ದ್ರವ್ಯ.

# ೧೩. ರವಿ ಕಾಣದ್ದು

೧

ಜನಗಹನದಲ್ಲಿ ಮೃಗ ಮೃಗದ ಜಾಡೇ ಮಾರ್ಗ
ಗವಿ ನಿದ್ದೆಗುಂಟು, ಎಚ್ಚರಿಸುವದು ಹಸಿ ಹಸಿವು
ಹೇಗೊ ಕಂಡರಸಿ ತಾ ಕಂಡ ಕನಸೇ ಸ್ವರ್ಗ
ಮಿಥುನ ನಿತ್ಯದ ಮಿಥ್ಯ, ನೆರಳ ನೀರೇ ರಸವು

೨

ಅಭ್ರ ಮಡಗಿಸಿಕೊಂಡ ಶುಭ್ರವಾದಾಗಸವು
ಕತ್ತಲೆಗೆ ಕಂತಿ ಕಟ್ಟಿದ ಹಾಗೆ ಓ ಗರ್ಭ।
ಗಾಳಿಗಿದೆ ಬರಿ ಬಯಲು ಉಸಿರೆ ಎನಿಸಿದೆ ಅಸುವು
ಇರುವೆಗಳ ಹಿಂದಿರುವೆ ಸಧ್ಯಃ ಸರ್ಗ ಅವರ್ಗ.

೩

ಭೂತಗಳ ಅರ್ಥವನು ಯಾ ಭೂತ ನುಂಗಿತೋ?
ಇಂದ್ರಿಯಂಗಳಿಗು ಇಂದ್ರನಿಗು ಎಂದೋ ವಿರಹ!
ಕಿರ್ರ ಕಿಲಕಿಲ ಕಿರ್ರ ಮೌನ ಬಿಲ ಭೃಂಗಿತೋ-
ತ್ಪನ್ನ; ಸದಸನ್ನ ಲಿಪಿ ಯಾವ ಬ್ರಹ್ಮದ ಬರೆಹ?

೪

ಚಿತ್ತು ಅತ್ತಂತಿತ್ತು, ಇದುವು ಅದರ ಸ್ವಭಾವ
ಸತ್ತು ಸತ್ತಂತಿತ್ತು ಅಲ್ಲಿ ಭಾವ ಅಭಾವ.

---

ಭಾವ : ಭಾವ ಹಾಗೂ ಅಭಾವ ಸ್ಥಿತಿ ಚಿಂತನೀಯ.

ಶಬ್ದಾರ್ಥ : ಸದಸನ್ನಲಿಪಿ=ಸತ್+ಅಸತ್ ಎರಡೂ ಅಲ್ಲದ ಅವಸ್ಥೆ. ವ್ಯವಸ್ಥಿತವೂ ಅಲ್ಲ; ಅವ್ಯವಸ್ಥಿತವೂ ಅಲ್ಲದಂಥ ಸ್ಥಿತಿ. ಋಗ್ವೇದೋಕ್ತವಾದ ನಾಸದೀಯ ಸೂಕ್ತದಲ್ಲಿ ಜಗತ್ತು ಪ್ರಳಯ ಕಾಲದಲ್ಲಿ ಸತ್ ಆಗಿಯೂ ಅಸತ್ ಆಗಿಯೂ ಇರದೆ; ಸದಸದ್ ರೂಪದಲ್ಲಿತ್ತು ಎಂದು ಹೇಳಲಾಗಿದೆ. ಕವನದ ಹೃದಯ ನಾಸದೀಯ ಸೂಕ್ತ.

# ೧೪ ಸಾದೃಶ್ಯ

೧
ಇದು ಗೋಡೆ; ಆದರೂ ಅದ ನೋಡೆ, ಯಾವುದೋ
ಸ್ಮೃತಿ ಮೂಡಿಬರುವಂತೆ, ವಿಸ್ಮೃತಿಯ ಪಾಳಿನಲಿ
ಮಾಟಮಾಟದ ಮೂರ್ತಿ ಇಣಿಕುತಿವೆ; ಈ ನೆಲವು
ಕಾಲ ಕೆರೆದನೊ? ಏನೊ ಹುರುಬರುಕು, ಆ ಸೊನ್ನೆ.
೨
ಈ ಗೊಣ್ಣೆ ದಿಟ್ಟಿಸಿದ ದಿಟದಲ್ಲೆ ಆಕಾರ
ಸಾಕಾರವಾಗಿ ಮುಖ-ಮುಖ-ಭಂಗಿ ತಂಗುತಿದೆ;
ಆ ಪಕ್ಕ ಈ ಪಕ್ಕ ಒಲೆಯೆ ತೆರೆ ಸರಿದಂತೆ
ಯಾವ ಕಾವಿಗೆ ಹುಟ್ಟಿತೋ ಇಲ್ಲಿ ಈ ಭಾವ?
೩
ಇದು ಘುಣಾಕ್ಷರ ನ್ಯಾಯ! ಹುಳ ತಿಂದ ಪ್ರೀತಿಯದು?
ನನ್ನ ಮನ ಘನದ ಯಾವುದೋ ತುಂಬಿ ಹಾತೊರೆದು
ಮುದ್ದಿಡುತ್ತಿದೆ ಮತ್ತೆ ಎದ್ದೆದ್ದು. ಹಾ! ಸದ್ದು,
ಇತ್ತ ಕಣ್ಣಿಗೆ ಗೊಂಬೆ, ಅತ್ತ ಗೊಂಬೆಗೆ ಕಣ್ಣು.
೪
ಯಾರೆ ಕೊರೆದಿರಲಿ, ತೆರೆದಿರಲಿ ಈ ಸಾದೃಶ್ಯ
ಈ ಅದೃಷ್ಟದ ದೃಷ್ಟಿದಾನ ದೃಶ್ಯಕವಶ್ಯ.

---

ಭಾವ : ಕವಿ ಕವನಸೃಷ್ಟಿಗೆ, ಪಕ್ಷಿ ತತ್ತಿಗೆ ಕಾವು ಕೊಟ್ಟಂತೆ ಕಾಯುತ್ತಾನೆ. ಸೃಷ್ಟಿಯ ಮೊದಲು ಕವನ ಗೋಡೆಯಂತೆ, ಮುಸಿಯ ಗೊಣ್ಣೆಯಂತೆ ಬಯಲು. ಕವಿಯ ಕಣ್ಣಿನ ಗೊಂಬೆ; ಗೋಡೆಯ ಮೇಲೆ ಅರೂಪದಲ್ಲಿರುವ ಗೋಡೆಯ ಕಣ್ಣು ಅಸಾಮಾನ್ಯ ಸೃಷ್ಟಿಗೆ ಕಾರಣ. ಕವಿಯು ದೃಷ್ಟಿದಾನ ಮಾಡದಿದ್ದರೆ ವಿಮರ್ಶಕರಿಗೆ ಕವನದ ಅರ್ಥ ಆಗದು.

ಶಬ್ದಾರ್ಥ : ಪಾಳಿ=ಸಮೂಹ. ದಿಟ=ಸತ್ಯ. ತಂಗು=ವಾಸಮಾಡು. ಘುಣಾಕ್ಷರ ನ್ಯಾಯ=ಭ್ರಮರವು ಬದಿರಿನಲ್ಲಿ ಕೊರೆದದ್ದು ಅಕ್ಷರಗಳ ಸಂಕೇತವಾಗಿ ಕಾಣುವ ರೀತಿ.

# ೧೫ ಊಹೆ

೧

ಕಣ್ಣು ಹಾಹೆಯ ಛಿದ್ರದಾಚೆ ಬೆಳಕಿನ ಗವಿಯು!
ಬೆಳ್ಳಿ ಪರದೆಯ ಮೇಲೆ ರೂಪದ ವಿರಾಟ್ ಭೂಮ!
ನೆನಹು, ಕನಸಿನ ಕಣಿವೆಯಲ್ಲಿಯ ಜನಸ್ತೋಮ?
ತೇಜಸ್ಸಿನುದರದಲಿ; ಇದ ಕಂಡನಾ ಕವಿಯು.

೨

ಹಾಲಿಲ್ಲ, ಬಟ್ಟಲಿಲ್ಲದ ಗುಟುಕೆ ಸವಿಸವಿಯು
ನಿರ್ವಿಷಯ ಸೃಷ್ಟಿಯಲಿ ಭೋಗ ಆತ್ಮಕ್ರೀಡೆ
ವಾಸನಾ ಸಂಜನಿತ ಸಂಸ್ಕಾರ ಅವಲೀಢೆ
ಭಾಗೀರಥಿಯು ಆಗಿ ಇಳಿದಂಥ ಜಾಹ್ನವಿಯು.

೩

ಇದು ವಿಚಾರದ ಹಳ್ಳವನ್ನು ಒಳಹೊಕ್ಕಿಲ್ಲ;
ಅಂತರಿಕ್ಷದ ಪಕ್ಷಿ ಈಕ್ಷಿಸುತ್ತಿದೆ ಕ್ಷಿತಿಜ
ಬರಿಯ ನೆರಳಾಟ ಮರುಳಾಟ ಗಾಳಿಗೆ ಸಹಜ;
ಭಾವಭಾವದ ಜಾಲ ಬಲೆಯಲ್ಲಿ ಸಿಕ್ಕಿಲ್ಲ.

೪

ಜೀವನದ ರಂಗದಲೆ ಭರತನಾಟಕಯುಗವು
ಓಹೋ! ಆಹ! ಊಹೆ! ನವ್ಯ ಈಹಾ ಮೃಗವು

---

ಭಾವ : ಕವನ ಸೃಷ್ಟಿಕ್ರಿಯೆಯ ವರ್ಣನೆ. ಇದು ಭಗೀರಥನ ತಪಸ್ಸಿನಿಂದ ಭಾಗೀರಥಿಯಾಗಿ ಭೂಲೋಕಕ್ಕೆ ಅವತರಿಸಿದ ಜಾಹ್ನವಿ-ಗಂಗೆಯಂತೆ ಮತ್ತು ಬಲೆಯಲ್ಲಿ ಸಿಗದಿರುವ ಪಕ್ಷಿಯಂತೆ ಇರುತ್ತದೆ. ಕವಿಯ ಕಲ್ಪಕತೆಯ ಅದ್ಭುತ ಕ್ರಿಯೆ ನಡೆಯುತ್ತದೆ.

ಶಬ್ದಾರ್ಥ : ಭರತ ನಾಟಕ ಯುಗ=ಮುದ್ರಾಭಿನಯ ಸಂಕೇತಕ್ರಿಯೆ. ಈಹಾಮೃಗ=ತೋಳ ಬಂತು ತೋಳ ಬಂತು ಎಂಬ ಕಥೆಯಂತೆ ಕಲ್ಪಕತೆ ಕವಿಯನ್ನು ಓಡಾಡಿಸುತ್ತದೆ.

# ೧೬ ಬಯಲ್

೧

ದೃಶ್ಯಕ್ಕು ಅದೃಶ್ಯಕ್ಕು ನಡುವೆ ಹೊಲೆ-ಗೆರೆ ಎಳೆದು,
ಮಾತು ಮನಗಳ ಬಾಲ ಹಿಡಿದು ಹಿಂದಕೆ ಜೋತು
ಹಿಡಿದ ಹಿಡಿಯಲೆ ಹೂಳಿ ಊಳುತಿದೆ ಸತ್ತೂತ್ತೆ,
ಆ ಧ್ವನಿಯಲ್ಲೇ ಏನೊ ಸುಳಿದು ಬರತಿದೆ ಬೆಳೆದು.

೨

ವಿದ್ಧವಾದಾ ಛಿದ್ರಮಾರ್ಗದಲೆ ಹಬ್ಬಿಹುದು
ತೂತುಗಾಣದ ಸುತ್ತುಮುತ್ತು ಮುತ್ತಿನ ರಾಶಿ
ಬಳ್ಳಿಮಿಂಚಿನ ಬಳಗ ಬೆಳಗದೇ ಮೌನವಿದೆ
ಬೆಳಕೆ ಮಬ್ಬಾಗಿಲ್ಲಿ ಆತನವ ತಬ್ಬಿಹುದು.

೩

ಏನಿಹದೋ ಆದೆ ಅಹುದು; ಬಯ್ತು ಇದ್ದುದೆ ಬಹದು
ಆ ಅನಾಹತ ನಾದ ಪಡೆದು ವರ್ಣವ್ಯಕ್ತಿ
ಆಹತದ ಬಂಧದಲಿ ಪಡೆದು ಸಹಜ ವಿಮುಕ್ತಿ
ನಿರ್ಬೀಜವಾಗದೇ ತಾನೆ ತರುವದ ತಹದು.

೪

ತರಣಿ ಉತ್ತರಿಸುತಿಹ ಬಯಲೆ ನಂದನ ವನವು
ಬೆರಣಿಯುಣ್ಣದ ಹೃದಯದರಣಿಯೇ ಇಂಧನವು.

---

ಭಾವ : ಕವನ ಎಂಬುದು ಸತ್ ಎಂಬ ಸತ್ಯವನ್ನು ಕುರಿತು ಮಾಡಿದ ಊಹೆ. ಅನಾಹತ ಧ್ವನಿ ಆಹತ ವರ್ಣಗಳಾಗುವ ಕ್ರಿಯೆ ಹಾಗೂ ಕುಳ್ಳು ಇಲ್ಲದೆ ಹೃದಯ ಎಂಬ ಯಾಗಾಗ್ನಿ ಹುಟ್ಟಿಸಲು ಉಪಯೋಗಿಸುವ ಕಟ್ಟಿಗೆ ಕುರಿತು ಚಿಂತನ.

ಶಬ್ದಾರ್ಥ : ಊಳು=ಕೂಗು. ವಿದ್ಧವಾದ ಛಿದ್ರ=ಮಾಡಲ್ಪಟ್ಟ ತೂತು. ಬಯ್ತು=ಮುಚ್ಚಿದ, ಗುಪ್ತವಾಗಿದ್ದ. ತರಣಿ=ಸೂರ್ಯ. ಬೆರಣೆ=ಕುಳ್ಳು, ಗೋಮಯ ತಟ್ಟಿ ಒಣಗಿಸಿದ ಕುಳ್ಳು. ಅರಣಿ=ಸಮಿಧಾ, ಯಜ್ಞಾಗ್ನಿ ಹುಟ್ಟಿಸಲು ಉಪಯೋಗಿಸುವ ಕಟ್ಟಿಗೆ.

## ೧೭ ನಟರಾಜನಿಗೆ

೧

ಇದು ಸ್ಪರ್ಶರೋಗ, ಹೋ ಸಂಸರ್ಗಜನ್ಯ ಇದು
ವೇದನೆಯ ನೋಂಪಿ, ಸಂವೇದನೆಯ ಹನನ, ಸಂ-
ಜನನ ಸತ್ಸಂಗವನೆ ಕಳೆದುಕೊಂಡೀ ಬಾಳು,
ಇದು ಬಂಜರು, ಹಾಳು. ಭೀಷ್ಮಶರ ತಲ್ಪದಲಿ,

೨

ಗಂಗೆ ಇಂಗಿತವರಿವ ಘನಚಿಂತೆ. ಪಾತಾಳ
ವಾಮನನ ಪಾದತಳ ಬಲಿಯ ಮಸ್ತಕದಾಳ;
ಮೂಗಿಲ್ಲ, ಕಣ್ಣಿಲ್ಲ, ಕಿವಿಯಿಲ್ಲ ಎದೆಯ ಡವ
ಡವ ಡಮರು ತಿಮಿರಾಂಧಕಾರ ಘನವಿಷ ತಿಮರು

೩

ನೋವಿಗಿದೆ ಧಾರೆ, ಅದ ಹೊಲಿವ ಸೂಜಿಯ ಕೈಗೆ
ಕರ್ತರಿಯ ಚಾಪಲ್ಯ. ಭೇದವಿದ್ದಲ್ಲಿಯೆ ಅ-
ಭೇದ ಸೀಮಂತಿನಿಯ ಶಿವರೇಖೆ, ಚಾಂಗುಭಲ!
ನನ್ನ ಉತ್ಸಾಹಕ್ಕೆ ನಿನ್ನ ಪಾದವೆ ಪಾಯ

೪

ಅಗಿದ ಅಗಿದಲ್ಲಿ ವೇತಾಳಾ-ಅಪಾಯ
ದಿಗ್ಗೇಡಿ ನಾನಂಧ-ನೀನು ನಾರದ ಗಂಧ

---

ಭಾವ : ನಟರಾಜನ ರೂಪದಿಂದ ತನ್ನ ಅಜ್ಞಾನವು ವಿಜ್ಞಾನದಿಂದ ಮರ್ದಿತವಾಗಬೇಕು ಎಂಬ ಭಾವ ಸ್ಫೋಟವಾಗಿದೆ.



# ೧೮ ಕಣ್ ಪಾಪೆ

೧

ಪಾಪ! ತಿಪ್ಪೆಯ ಮೇಲೆ ಬಿದ್ದಿತ್ತು ಪಾತಕದಂತೆ.
ಕಾಮರತಿ ಆಡಿಸಿದ ಯಾವ ಪಾತರಗಿತ್ತಿ
ಬಿತ್ತಿದಳೊ ಬಾಳೆ ಎಲೆಯೊಳು ಸುತ್ತಿ ಈ ಬಾಳ!
ಅವರವರಿಗವರ ಬದುಕೇ ಸವಿಯು; ಇದು ಯಾವ
ಗಂಡಸಿನ ಹೇಡಿ ಕೆಲಸವೊ ಕಾಣೆ; ಪತನ ಗರ್ಭಕೆ ಸಹಜ.
ಕರುಳಿಗಿದೆಯೇ ಕರುಣೆ? ಶೋಕವೇನೋ ಮೂಕ.
ಕಾಣದೇ ಈ ಲೋಕ? ಲೋಚನ ಭ್ರಷ್ಟ! ಹಾ ಹಾ, ಕಷ್ಟ,
ಭಯಗೊಂಡ ಪಿಂಡ ಬೀಭತ್ಸಕ್ಕೆ ಭೂರ್ದಂಡ!

೨

ನಮ್ಮ ಪಾಪದ ಹಾಗೆ ಕೋಪವೂ ಅವಿವೇಕಿ.
ದಾರುಣಕೆ ಕಾರುಣ್ಯವೃಷ್ಟಿ ಬೇಕೇ ಬೇಕು.
ನಿಷ್ಕಾಮ ರತಿಗೆ ಪ್ರೀತಿಯ ಕೀಳಿ ಮಟ ಮಾಯ.
ಬೀಜ ಬಿಂದುವಿಗೇಕೊ ಒಳಗೆ ಚೇಳಿನ ಕೊಂಡಿ?
ಗರ್ಭಾವತಾರಕ್ಕು ಬಂತು ಪ್ರಾಣೋತ್ಕ್ರಮಣ
ಈ ಅನಾದಿಯ ದೃಶ್ಯ, ಚಿತ್ತ ಪಿತ್ತ ಭ್ರಮಣ.

ರಚನೆ : ೨೨-೭-೧೯೬೩

---

ಭಾವ : ಕರುಣಾವಿಹ್ವಲರನ್ನಾಗಿ ಮಾಡುವ ಒಂದು ದೃಶ್ಯ ಪ್ರತೀಕವಿದೆ. ಅಳುವದೊಂದೇ ಕರುಣೆಯ ಕೆಲಸವಲ್ಲ. ಕಾರುಣ್ಯವು ಕರುಣಾತೀತ. ಶೋಕಹರಣವಾಗಬೇಕು. ಶೋಕಕ್ಕೂ ಎಡೆಯಲ್ಲದವನು ಸಹೃದಯನೆ? ಶೂದ್ರನೂ ಶೋಕದಿಂದ ಪವಿತ್ರನಾಗುತ್ತಾನೆ ಎಂದು ಹೇಳುತ್ತಾರೆ. ಶುಚಾದ್ರವತಿ ಶೂದ್ರಃ.

ಶಬ್ದಾರ್ಥ : ಭೂರ್ದಂಡ=ವ್ಯರ್ಥ.

# ೧೯ ಅಷ್ಟಗ್ರಹಯೋಗ*

೧

ಎಂಥೆಂಥ ಜನರಗೂ ಚಿಂತೆ ಹುಟ್ಟಿಸಿತಲ್ಲ
ಈ ಯೋಗ! ಆಗುವುದು ಆಗುತಿದೆ, ಹೋಗುವುದು
ಹೋಗುತಿದೆ. ಒಳಗೆ ನೋಡುವಗೆ ಕಾಣುವದೆಲ್ಲ
ಭಯಭಕ್ತಿ ಮೂಡಿಸುತ್ತುದ್ಭವಕೆ ಸಾಗುವದು

೨

ಏನೊ ಕಾಲದ ಪುಣ್ಯ! ಹೀಗೇಕೆ? ಹಾಗೇಕೆ?
ಎಂಬ ತರ್ಕಕ್ಕೆಳೆದು ಎಣೆಸುತಿದೆ. ಗುಣೆಸುತಿದೆ.
ಕರ್ಮಕೆಳಿಸಿದ ಧರ್ಮಫಲಕೆ ಚಿಂತಿಸಬೇಕೆ?
ಆದರೂ 'ಕೃಪೆ' ಉಂಟು; ಅದೆ ಲೋಕ ಮಣಿಸುತಿದೆ

೩

ಕಾರ್ಯಕ್ಕೆ ಕಾರಣವ ಹುಡುಕುವದೆ? ನೆನೆಸಣ್ಣ
ಕರ್ತೃವನು! ನಿನ್ನ ಅಪತ್ತೆಲ್ಲ ಅದಕಾಗಿ
ವಿಕ್ರಿಯೆಯ ಬದುಕಾಗಿ, ಮಟಮಾಯ ತೆರೆ ಕಣ್ಣ
ಎಚ್ಚರದೊಳಿರು ತಿಮ್ಮ! 'ಅಕುತೋಭಯನ್' ಆಗಿ

೪

ಹೂಲಿಯನ್ನೆಬ್ಬಿಸುತ ಲೂಟಿ ನಡೆಸಿದೆ ಗುಲ್ಲು
ಮಾನವ ಭವಿಷ್ಯತ್ತು ಶಿಲ್ಪಿ ಕೈಯಲಿ ಕಲ್ಲು

*'ಯೋಗ' ಎಂಬ ಶೀರ್ಷಿಕೆ ಇತ್ತು

---

ಭಾವ : ಅಷ್ಟಗ್ರಹಯೋಗ ನಿಮಿತ್ತದಿಂದ ಜನರಲ್ಲಿ ಹುಟ್ಟಿದ ಹೂಲಿಯ ಗೇಲಿಯನ್ನು ಅಣಕಿಸುತ್ತ ಬರೆದ ಕವನ.

ಶಬ್ದಾರ್ಥ : ಅಕುತೋಭಯನ್=ಯಾವಕಡೆಯಿಂದಲೂ ಭಯವಿಲ್ಲದ್ದು.

# ೨೦ ಇಂದ್ರಪಟ್ಟ

೧
ದೇಹಿ! ಎಂದವಗೆ 'ನ' 'ನಹಿ' ಎನ್ನ ಬಹುದೇ ಬಲಿ ?
ದಾನವನೆ ಕೊಟ್ಟ ಕೈಮೇಲು, ಕೊಂಡವ ಕೀಳು
ಅಣುವನ್ನು ತುಂಬಿ ಮಹಿಮೆಯ ಮಿಕ್ಕಿನಿಂತ ಕಲಿ
ಆಳ ಎತ್ತರ ಸುತ್ತು ಮೈಯ ಮಾಡುವ ಆಳು.
೨
ಶುಕ್ರನೀತಿಯ ನುಡಿಗೆ ಅಂದಿಗೇ ಒಕ್ಕಣ್ಣು!
ಮುಕ್ಕಣ್ಣ ಮೇಲ್ಮೆಯಲಿ ಚೆಲುವ ಕಾಣದ ಕುರುಡು
ಅಹಮಹಮ್ಮಿಕೆ ಹೊಟ್ಟು ಹುರುಳಿಗಿಂತಲೂ ಹುರುಡು ;
ಜೀವಾಳ ಹಣ್ಣಾಗಿ ಉಳಿದುದಾಯಿತು ಮಣ್ಣು.
೩
ಪಾತಾಳದಲ್ಲಿ ಬಲಿ ಬೀಜ ಇನ್ನೂ ಉಂಟು
ಕೊರತೆ ಕಾಣದ ನಿರಿತಿನಲ್ಲಿ ಬಾಳುವ ಬದುಕು
ಮೂಡಿಯಂಕುರಿಸೀತು ರೂಢಿಯಲಿ ಅದಕಿದಕು.
ಹರಿಹರರು ಕಾಯರೇ ಬಾಗಿಲನು? ಅದು ನಂಟು;

ಕಲಿಯುಗದಿ ಹುಲುಸು ಬೆಳೆ ! ಆ ಕೃತಜ್ಞತೆ ಮಟ್ಟ
ನಾಡಿದಿನ ಆಚೆಗೋ ಬಲಿಗೆ ಇಂದ್ರನ ಪಟ್ಟ

---

ಭಾವ : ಈ ಸುನೀತದಲ್ಲಿ ಬಲಿ ಮತ್ತು ವಾಮನರ ದಾನ ಪುರಾಣವು ಭಿತ್ತಿಯಾಗಿದೆ. ವಾಮನನು ಅಕೃತಜ್ಞನಲ್ಲ, ಬಲಿಯೂ ಕೃತಧೀರ ಎಂಬ ಔದಾರ್ಯ ದರ್ಶನ ಇಲ್ಲಿದೆ.

ಶಬ್ದಾರ್ಥ : ನಿರಿತು-ನಿರತೆ=ಸೊಬಗು.

# ೨೧ ಬ್ಯಾಬೆಲ್

೧

ಕಳಘಮೋ? ಕಾಳಗವೊ? ತ್ರಿಕುಳ ಸಂಘದ ಕೂಟ?
ಹರಿ-ಹರಿ! ಹರ-ಹರಾ! ಭಕ್ತಿ ಮೋಕ್ಷದ ಯುದ್ಧ
ಕಾದಾಡುವಿಬ್ಬರಲಿ ಯಾರು ಎಚ್ಚರ ಇದ್ದ?
ರಾಮ ರಾವಣಗಾಗಿ ವಾನರರ ಕಾದಾಟ.

೨

ಕೇರಳಕು ಕುಂತಳಕು ದುಷ್ಟಬುದ್ಧಿಯ ಗಂಟು;
ಕಮ್ಮೆ, ಅದಕೊಮ್ಮೆ, ಇದಕೊಮ್ಮೆ, ಎರುಮ್ಮೆ ನಾಡು
ಶಬರ-ಆಂಧ್ರ-ಪುಳಿಂದ-ಪುಂಡ್ರ-ಪುಲ್ಕಸ ಜೋಡು
ಆದಿ ಆಹಾದಿ ದ್ರಾವಿಡಕೆ ಎಲ್ಲೂ ಉಂಟು.

೩

ಬಂಗಾರ ಲಂಕೆಗೂ ಇಲ್ಲದಾಯಿತೆ ಬಾಯಿ?
ಮಂಡೋಧರಿಯ ಮಾಯೆ ಮಾಯವಾಯಿತೆ ಮಾಗಿ?
ಕಿಂಕ್ರಾಂತಿಕಾಗಿ ಪೌಲಸ್ತ್ಯ ಪಿಂಡಕ್ಕಾಗಿ-
ರಾವಣನ ತೋಟದಲಿ ಮಂಗಮೋತಿಯ ಕಾಯಿ!

೪

ಬ್ಯಾಬೆಲ್ಲ ಗೋಪುರದ ಒಳಗೆ ಸದ್ದೋ ಸದ್ದು
ಬೇಡುವೇಡರ ಬೇಂಟೆ ಇದು 'ವೇಂಡಾಂ,' ಅದು 'ಒದ್ದು'

---

ಭಾವ : ದ್ರಾವಿಡ ಪಂಚಕದ ಶಾಬ್ದಿಕ ಘೋಷವು ಬ್ಯಾಬೆಲ್ ಗೋಪುರದ ಕೆಲಸಗಾರರಂತೆ ಅನರ್ಥಕ್ಕೆ ಈಡು ಮಾಡುತ್ತದೆ. ಎಲ್ಲ ದೇಶಭಾಷಾ ಕಲಹಗಳ ಅರ್ಥ ಇಷ್ಟೆ! ಭಾವ ಪ್ರಾಪ್ತಿಯಿಲ್ಲ. ಅಭಾವದ ಹುಂಕಾರ ಹೆಚ್ಚು.

ಶಬ್ದಾರ್ಥ : ಕಿಂಕ್ರಾಂತಿಕಾಗಿ-ಮಂಗಮೋತಿಯ ಕಾಯಿ=ಅಗಸ್ತ್ಯ ಒಳಗಿನವ, ಪುಲಸ್ತ್ಯ ಹೊರಗಿನವ. ರಾವಣ ಪೌಲಸ್ತ್ಯ ಗೋತ್ರದವನು. ರಾವಣ ಮಾಡಿದ ಕ್ರಾಂತಿ ಸಂಕ್ರಾಂತಿಯಾಗದೆ ಕಿಂ+ಕ್ರಾಂತಿಯಾಯಿತು. ಹನುಮಂತನು ಗಿಡಕ್ಕೆ ಬಿಟ್ಟ ಕಾಯಿ ಮೋತಿಯವನಾಗಿ ಅಶೋಕವನವನ್ನು ಹಾಳು ಮಾಡಿದನು. ವೇಂಡಾಂ=ಬೇಡ (ತಮಿಳು ಶಬ್ದ) ಒದ್ದು=ಬೇಡ (ತೆಲಗು ಶಬ್ದ).

# ೨೨ ಹೊಲಸು

೧
ರತಿ ರಂಡೆಯಾದಳೆಂದೆದ್ದಿತೊಂದೇ ಬೊಬ್ಬೆ!
ಶಿವನ ಕಣ್ಣೊಳಗಿತ್ತು ರುದ್ರರೌದ್ರದ ಕಿಚ್ಚು
ಕಾಮ ಪೌರೋಹಿತ್ಯಕಿನ್ನು ಬೆಂಕಿಯ ಹಚ್ಚು!
ಓ ಯಕ್ಷಿ! ಹೈಮವತಿ! ಏನಾಯಿತೆ ಅಬ್ಬೆ?
೨
ಸುಕುಮಾರ ಸಂಭೂತಿಗಾಗಿ ಧೋ-ಧಬಧಬ್ಬೆ!
ದೇವ ವಿಜಯ ಮಯೂರ ಹಾಕುತ್ತಲಿದೆ ಕೇಕೆ!
ಅಸುರದಲ್ಲಣನಾದ ಬಾಯಿಬಿಡುತಿದೆ ಮೇಕೆ,
ಶಿವ ವೀರ್ಯದೀ ಪಿಂಡ, ಕಾಡು ಕಾಮನಕಬ್ಬೆ?
೩
ಚೈತ್ರ ರಥದಲಿ ವಸಂತನ ಬರವು ಎಂದಿಗೂ
ಮಾಂದಳಿರು ತೋರಣದ ಮುಂದೆ ಮಾಮಿಡಿ ಗುಡಿಯು
ಚಂದಿರಗು ಶುಕಪಿಕಕು ಮಾಗಧಗು ಬಂದಿಗೂ
ಕಾಮುದ ಅನಿರ್ವಾಚ್ಯ ಪ್ರೇಮ, ಧ್ವನಿಸುವ ನುಡಿಯು
೪
'ಹುಲಿಗೆ ಹುಲಿಗ್ಯೊ!' ಕೂಗು ತೇಗು ಗೊಬ್ಬರ ಹುಲಸು
ಹೊಲೆ ಸೀಮೆಗಂಡು ಹನ್ನೆರಡು ತಿಂಗಳ ಹೊಲಸು

---

ಭಾವ : ಫಾಲ್ಗುಣ ಚೈತ್ರ ಮಾಸದ ಮಧ್ಯೆ ಬರುವ ಹೋಳಿ ಹುಣ್ಣಿಮೆಯ ಸೀಮಾಪರ್ವತದಲ್ಲಿ ಹೊಲಸು ಸುಟ್ಟು ಹೋಗಬೇಕು ಎಂಬ ಭಾವವಿರಲಿ. ಹೊಲಸನ್ನೇ ಹೆಚ್ಚು ಮಾಡುವ ಕೃತಿ ಇರಬಾರದು ಎಂಬ ಧ್ವನಿ, ಪ್ರತಿಧ್ವನಿ ಇಲ್ಲಿ ಇದೆ.

## ೨೩ ಪ್ರಬುದ್ಧ

೧
''ಇದು ತಪ್ತಮುದ್ರೆ, ಈ ತೀರ್ಥ ಸಿಂಚನದಲ್ಲೆ
ಕಣ್ಣಿಗೂ ಕಾಣ್ಕೆಗೂ ನಡುವೆ ಅಂತಃಪರದೆ
ಕೃಪೆಯ ವಿದ್ಯುಲ್ಲೇಖೆ ಕೃಷ್ಣರೇಖೆಯ ತೆರದೆ
ಚಿತ್ರ ಕತ್ತರಿಸೀತು : ಕೇಳ್ ಮೃದಂಗದ ಸೊಲ್ಲೆ,
೨
ಓ ಬೊಲ್ಲ! ಹಿಂದಿರುಗು ; ಹಾದಿ ತೀರಿತು ಇಲ್ಲೆ
ಬಂಜೆ ಬಯಲಲು ಒರತೆ ಬರದೆ ಬಯಕೆಯ ತೊರೆದೆ ?
ತತ್ತಿನಾ ತತ್ತಿಯಲಿ ಸತ್ತು ಸೊತ್ತೆನಿಸಿರದೆ?
ವಾಸನೆಗಳಡಗಿದವು ನಿನ್ನ ಆಸನದಲ್ಲೆ,
೩
ಪ್ರಳಯ ಜಲಧಿಯ ಬಡವ ಹೊತ್ತಿಸಿದೆ ಆರತಿಯ
ಆ ಪ್ರವಾಳದ ಪಲ್ಲವಿಯ ಪಾಡು ದನಿದೋರಿ
ಕುಡಿದೀತು ನುಡಿನುಡಿಗೆ ಪೌರುಷೇಯದ ಕತೆಯ
ಹಯವದನವಾಗಿ ತಾ ರಸಪಯೋಧಿಯ ಸೇರಿ
೪
ಕಲ್ಕಿ ನಾನಾದಾಗ ಬಾ ನನ್ನ ಹರಿಯಾಗಿ
ಅಲ್ಲಿವರೆಗೂ ಮುಳುಗು ಸುತ್ತು ದಿಕ್ಕರಿಯಾಗಿ.''

---

ಭಾವ : ಬುದ್ಧ ದೇವನಿಗೂ ಅವನ ಕುದುರೆ 'ಬೊಲ್ಲ'ಕ್ಕೂ ಆದ ವಿರಹದ ಕಾರುಣ್ಯ ಪ್ರಸಂಗವನ್ನು ಹಾಗೂ ಮುಂದಾಗಬಹುದಾದ ಸಂಯೋಗದ ನಿರೀಕ್ಷೆಯನ್ನು ಹೊಸ ದಿಕ್ಕಿನಿಂದ ಕಾಣ್ಕೆಯಾಗಿ ತೋರಿಸಲಾಗಿದೆ.

ಶಬ್ದಾರ್ಥ : ಪ್ರವಾಳ=ಚಿಗುರು. ಪೌರುಷೇಯ=ಮನುಷ್ಯ ಕೃತ. ಪಯೋಧಿ-ಪಯೋನಿಧಿ=ಕಡಲು, ಕ್ಷೀರಸಮುದ್ರ.

## ೨೪ ಡೂ

೧

ಡೂ ಡೂS ಡೂ ಎನ್ನುವಾ
ಡೂಗಿನ ನಡೆಯವನS ನುಡಿಯವನS
ಮಾಡೂS, ಹಾಡೂS, ನೀಡೂS
ಈ ಡೂS ಯಾS ಊರ ಕಡಿಯವನS
ಕರಿ ಅವನS.

೨

ಹೂ ಹೂS ಹೂ ಎನ್ನುವ
ಹೂವಿನ ಮುಡಿಯವನS, ಕುಡಿಯವನS
ಮಾಹೂS, ಬೇಹೂS, ನೀಹೂS
ಈ ಹೂS ಅರಳಿಸುವವನS
ಮರಳಿಸು ಅವನS.

೩

ಕಾಕೂ ಕೂಕೂ ಕುಕಿಲೂವವನ
ನಕಲೀಯವನS ಕೋಕಿಲ ನವಿಲೀನವನS
ಸಾಕೂS ನಾಕೂS, ಬೇಕೂS,
ಈಕೂS ಜೀಕಿಸುವವನS
ನೂಕಿಸು ಅವನ,

೪

ಯಮಯಮಿಗೆ ಸಂವಾದ
ನಡೆಸೀದವನꜱ ನಮ ನಿಮಗꜱ ವಾꜱದ ಸರಣಿ
ಈ ಡೂ, ಹೂ, ಕೂ, ಹೂಡೂಕೂ, ಕರುಣೀ
ಬೆಲ್ಲದ ಕರಣೀ, ಭರಣೀ
ತೆರಿ ಮುಚ್ಚಳ, ಆವರಣೀ.

---

ಭಾವ : ಸಾಮಥಂದದ ಅತಿ ಚಮತ್ಕೃತಿಯ ಊಹಾಗಾನ. ಹೊಸಹೊಸದಾಗಿ ಹುಡುಕುತ್ತಿರಬೇಕು ಎಂಬ ಧ್ವನಿ ಈ ಕವನದ ಆತ್ಮ.

ಶಬ್ದಾರ್ಥ : ಡೂಗಿನ=ಬೆನ್ನು ಬಾಗಿದ.

ವಿಶೇಷ : ಸಂಖ್ಯಾಸಂಕೇತ ಭಾಷೆಯ ಪ್ರಕಾರ ಹೂ=೮; ಡು=೩; ಕು=೧. ೮೩೧-೧೩೮=೪೬+೪೬+೪೬ ತಂದೆ+ತಾಯಿ+ಮಗು ಇವರಲ್ಲಿ ಇರುವ ಒಟ್ಟು ಕ್ರೋಮೋಝೋಮಗಳ ವರ್ಣತಂತುಗಳ ಮೊತ್ತ. ನುಡಿ-೪ : ಯಮಯಮಿ ಸಂವಾದ ಋಗ್ವೇದ ಮಂ.=೧೦. ಸೂ.=೧೦ - ೧ ರಿಂದ ೧೪ ನೋಡಬೇಕು. ಈ ಕವನದ ಒಟ್ಟು ಅರ್ಥಕ್ಕಾಗಿ - ಬೇಂದ್ರೆ ಕಾವ್ಯಲೋಲಕ, ವಾಮನ ಬೇಂದ್ರೆ. ಪು.೧೦-೧೨. ಸಮಾಜ ಪುಸ್ತಕಾಲಯ, ಧಾರವಾಡ, ೧೯೮೨.



# ೨೫ ನೋಽಽ

೧
ಅದು ಏಽನೋ ಇತ್ತು
ನೋ, ನೋ, ನೋ, ಎನುತಿತ್ತು
ಎನುತಲೆ ಇತ್ತು;
ತಲೆ ಇತ್ತು; ಅತ್ತಲೆ ಇತ್ತು
ಬತ್ತಲೆ ಬಾಲಕನಂತಿತ್ತು
ಅಳುತಿತ್ತು ನಗುತಿತ್ತು.
೨
ತಾ, ತಾ, ತಾಯೀ
ಎನುತಿತ್ತು
ತಾಽನೋ ? ನಾಽನೋ ?
ನೀಽನೋ ?
ಏಽನೇಽನೋಽ
ಆತನೋ ? ಆತ್ಮನೋ ?
ಅವನೋ ?
ಅಮ್ಮನೋ ? ಅಪ್ಪನೋ ?
ಅಪ್ಪುವನೋಽಽಽ ?
ತಪ್ಪುವನೋಽಽಽ ?
ಒಪ್ಪುವನೋಽಽಽ ?
ನೋ, ನೋಡೂ, ಕೂಡೂ
ಒಡಂಬಡು.

೩

ನೋ, ನೋಽಯದೆ ಇಲ್ಲಾ
ಎಲ್ಲವ್ವಾ!
ನೋಽವಿನ ಸಿಪ್ಪೆಯ ಸುಲಿದೀಽಽಽ
ನಂದನೋ? ಕಂದನೋ?
ಬೆಂದರೆ ನೋ-ತಿಂದರೆ ನೋ
ನೋ, ಸೈ, ಸೈನೋ?
ಯಾ ಸೈನೋ?
ನೋ? ನೋಣವೋ?
ಅಣುವೋ? ಗುಣವೋ?
ಗುಣಗುಣವೋ?
ಜೇನ್ನೊಣವೋ?
ಜೇಽಽಽನೋಽಽಽ ಮೇಽಽಽಣೋಽಽಽ
ಹುಟ್ಟಿನ ತುಂಬೆಲ್ಲಾ
ರಾಣಿಯು ನೋ, ರಾಜನು ನೋ
ತಂಬುಲ ನೋ-ರಸದಂಬುಲ ನೋ
ಚರ್ವಣೋ-ಪರ್ವಣೋ
ಣೋಽ ನೋಽ ಮೋಽ
ನಮೇಽ ನಮೋಽ ಚಮೇಽ ನಮೋಽ
ನೋಽ, ನೋಽ, ನೋಽ.

---

ಭಾವ : 'ನೋ' ದಲ್ಲಿ 'ನೇತಿ'ಗೆ ಪ್ರತಿ ನೇತಿಯನ್ನೊಡ್ಡುವ ಚಮತ್ಕಾರವಿದೆ. ನೋವು ಅನುಭವಿಸದೆ ಪ್ರಸೂತಿ ಇಲ್ಲ. ಕಂದನ ಪ್ರಾಪ್ತಿಗಾಗಿ ಈ ಅನುಭವ ತಾಯಿಯ ಜೀವನದಲ್ಲಿ ಮಹತ್ತ್ವದ ಪಾತ್ರ ಪಡೆಯುತ್ತದೆ.

ಶಬ್ದಾರ್ಥ : ನೋ=ಘಟ=ಆಗಲಿಕ್ಕಿಲ್ಲ, ಸೈನೋ=Sign, Signature, Signal ಎಲ್ಲವೂ ಸಂಕೇತ ಸೂಚನೆಗಳು. ನಮೇ, ಚಮೇ=ಮಂತ್ರಾಕ್ಷರಗಳು.

ವಿಶೇಷ : ಸಂಶಯಮುಕ್ತಿಯೇ ಶಾಶ್ವತ ಸುಖ. ವಿಶ್ರಾಂತಿಯೇ=ವಿಶ್ವಬಾಲಕ=ಜೇನು. ವಿವರಣೆಗಾಗಿ "ಬೇಂದ್ರೆ ಕಾವ್ಯ ಲೋಲಕ" ವಾಮನ ಬೇಂದ್ರೆ, ಪುಟ ೧೩-೧೬, ಸಮಾಜ ಪುಸ್ತಕಾಲಯ, ಧಾರವಾಡ, ೧೯೮೨.

# ೨೬ ಕಾಮೂಽ। ಈಶಾರ್ಪಿತವಾದವರೆಲ್ಲಾ।

ಕಾಮೂಽ। ಈಶಾರ್ಪಿತವಾದವರೆಲ್ಲಾ
ನಾಮಾ। ಧರಿಸಿರಿ॥ ಗುಪ್ತ॥ ನಾಮಾ ॥
೧
ಸುಪ್ತಿಽಯ ಜ್ಞಾನಽ ಕಳೆವಽ
ದೀಪ್ತಿಯ ಪಡೆದವರೆಲ್ಲಾ। ಅಪ್ತಽನ, ಪ್ರಾಪ್ತಽನ
ನಾಮಾ ಧರಿಸಿರೀ॥ ಅದು ಸರಿಯೋ॥ ನಾಮಾ
ಇದು ಸರಿಯೋ? ಉದು ಸರಿಯೋ?
ಎಂದು ಆಕುಲಿತರಾಗದೇ
ಸಿರಿಧರನ। ಗಿರಿಧರನ
ನಾಮಾಽಽ
ನೇಮಾ। ಹೋಮಾ। ಗೋಮಾ। ಬಳಿದು
ಉಸಿರುಸಿರಿಗೆ ನಾಮಾ
ಮುಖ್ಯ ಪ್ರಾಣನಾ। ಹೃದಯಾಧಿಷ್ಠಿತ ನಾಮಾ
ಆವಿಷ್ಟಿತ ನಾಮಾ.
೨
ಪ್ರೇಮುಽವನ್ನೆಽ ಅಗಳುವಽ। ನಾಮಾ
ಪ್ರೇಮವನ್ನೆಽ ಉಗುಳುವಽ। ನಾಮಾ
ಬೊಗಳುವಽ ತೆಗಳುವಽ। ನಾಮಾ
ಹೂಳಿ
ಹೂವಗರಳೂವಾಽ ನಾಮಾ। ಧರಿಸಿ.
೩
ಇದು ಧಾರಣೆ। ಇದು ಸಮಾಧಿ
ಇದು ಸಂಯಮಾ
ಇದು ಉದ್ಯಮಾ!
೪
ನಾಮಾ। ಪ್ರೇಮಾ। ಭೂಮಾ
ಎಂದೋಂಕರಿಸುವ ನಾಮಾ
ಶ್ರುತಿಯನು ಕಟ್ಟಿಹ ನಾಮಾ
ಶ್ರುತಿಗೆ ಶ್ರುತಿ ಕೊಟ್ಟಿಹ ನಾಮಾ

೫

ನಾऽ। ಮಾऽ
ಎಂದೊರಲುವೆ। ಭೂಮಾ
ಎಂದುಸಿರೌ। ತಾಯೀ
ದಕ್ಷಿಣೇಶ್ವರೀ
ಭೂಮಾಹ್ವಾನಾ। ಆ ವಾಹನಾ.
ನಾ, ನಾ, ನಾ, ಮಾ, ಮಾ, ಮಾ
ಸದ್ಗಮಯ
ಜ್ಯೋತಿರ್ಗಮಯ
ಅಮೃತಂಗಮಯ
ಮಾ-ನಾ
ಅತ್ಯಂತ ತಿರಸ್ಕೃತಿ ವಾಚ್ಯಾ
ಪ್ರಮಾಣಾ.

೬

ಅಪ್ರಮಾಣಾ ಸ್ವಪ್ರಮಾಣಾ
ದಿವ್ಯಾऽ-ಸ್ಫುಟಿತಾ
ಧ್ವನಿತಾ
ನಾದದ ಸರಿಗಮ ತಾನಾ। ನಾ
ಆ ಮಾ ನಾ
ನಾಮಾ, ಭೂಮಾ, ಪ್ರೇಮಾ
ಭೂಮಾ, ಭವಮಾ, ಸಂಭವಮಾ
ಉದ್ಭವಮಾ
ಮಾऽ, ಮಾऽ, ಮಾऽ.
ಆ ಊ ಮಾ
ಈ ಊಹಾಗಾನಾऽऽ
ಭೂಮಾऽ ಭೂಮಾऽ, ಸ್ವಯಂಭೂಮಾ
ನಾಮಾ। ನಾಮಾ

---

ಭಾವ : ಗುಪ್ತ ಭಕ್ತಿಯ ನಾಮದೀಕ್ಷೆ ಪಡೆದವರ ವಿಲಾಸವಿದೆ.

ಶಬ್ದಾರ್ಥ : ಅಗಳುವ=ಸ್ನಾನ ಮಾಡುವ ಕಂದಕ, ಆಖಾತ. ಗೋಮಾ=ಗೋಮಯ=ಆಕಳ ಸಗಣಿ.

ವಿಶೇಷ : ಕವನದ ಛಂದಸ್ಸು ಸಾಮಛಂದಸ್ಸಿನ ಊಹಾಗಾನ.

## ೨೭ ಪರಾಕಿ ಶರ ರೂಪಾऽ

೧

ಪರಾऽ ಶರ ರೂಪಾऽ
ಶರಣ್ಯಾऽ-ಶರಣಾ
ಚೇತನಾ-ಅಂತಃಕರಣಾऽ
ಓ ಧರಣೀ ಗಂಧಾऽ
ಉಸಿರಿಗೆ ಆನಂದಾ.
ವಾಸನಾऽ ನಿರ್ಮಲ ಚರಣಾऽ
ಪುಂಡರೀಕಾಭರಣಾ
ನಂದಿನೀ ವಸಿಷ್ಠಾ ಮಾತಾ
ಸ್ವಯಂ ಸುಪ್ರೀತಾ,
ತೊರೆ, ತೆರೆ, ಮರೆ ಮಿಂಚೇ
ಅರೆ-ಅರೆ ಕೂಡಿರೆ ಅಂಚೇ?
ರಸದಾವರೆ ಅರಸಂಚೇ!

ಜನನೀ-ಜನಕಪ್ರಾಯಾ
ವಿದೇಹಾ! ನಿರಪಾಯಾ
ಸಾಧನೆಗಾಯುದಾರ್ಯಾ
ಕರುಣಿಸೆ ಉತ್ತರಣೇ
ನಿರಾವರಣೇ ಕರಣೇಕರಣೇ
ನಿರ್ಮಥನಾऽ ನವನೀऽತ ಜಾಯಾ
ವ್ಯಾಕರಣೇऽ ಸಾಕೀ ऽ ನಿರಾಕರಣೇऽ
ಶರಧನು ರೂಪಾ ವಾಣಿऽऽ
ಪಶ್ಯನ್ ಪಶ್ಯನ್ ಶ್ವಸನ್ ಜಿಘ್ರನ್
ಕ್ಲೀಂಕರಿ ಸುತ್ರಾಣಿ
ಶಬ್ದ ಬ್ರಹ್ಮನ ರಾಣೀऽ
ಛಂದೋಗಮುಕಾಚ್ಛಾದನೇ!

ವ್ಯಕ್ತಾऽವ್ಯಕ್ತಾ
ಅನುಗ್ರಹಿಸೌ-ಸದನೇ ಸದನೇ
ವಿಶ್ವಂऽಚರಂತಿऽ
ಅಭ್ರಾಂತಾऽ ಶಾಂತಾऽ
ಹೃದಯಾಂಕಿತ ಕಾಂತಾऽ
ಅನೇಕೇಕಾಂತಾऽ !
ಪರಾ ಸೂತ್ರಾಧಾರಾऽ
ಅಂಬಿಕಾऽऽ ವಿಜೃಂಭಿಕಾऽ
ಶಿವಹರ ಶಂಭೋ
ಎಂಬೋ ನಂಬೋ

ದತ್ತಾ; ಧಿಗಧಿತ್ತಾ
ಕನ್ನಡಿ-ನಿನ್ನಡಿ-ನಡಿ
ನಡಿ ಒಳಗೆ
ಅಂಧಃಕಾರವೆ ತೊಳಗೆ
ತೊಳತೊಳಗೆ
ಶುಭಂ ಭೂಯತ್.
ಮಂಗಳಂ ಭೂಯತ್.
೨
ಪರಾಕುऽ, ಕೂಕೂ, ಕೂಹೂ
ಪ್ರಫುಲ್ಲಾ ಸಹಕಾರಾ ಆಮ್ರಾ
ಭ್ರಮರಾಂಬಾ-ತುಂಬಾ
ಗುಂಭಾ-ಆರಂಭಾ
ಸಂಘಾತೇ ಪರಿಣಮಿತಾऽ
ವಿವರ್ತಾಭಾಸಾ.
ಸ್ವಪ್ನವಿಲಾಸಾ ವಾಸವದತ್ತಾ.

ವಾಸಿವೀऽ ಇಂದ್ರಾ
ಸ್ವಸ್ಥಾऽ ಚಿತ್ತಾऽ ಚಿತ್ರऽ ಕೇಂದ್ರಾ
ನಮೋ ನಮೋ ರಕ್ಷ ಮಾಂ ಮಾತಾ
ಸುಪ್ರೀತಾ

೩

ಮೂಲಾಧಾರಾ ಪರಾ
ಹೊಕ್ಕರಿಣಿಯ ಬಿಂಬಾ
ಗರ್ಭಿಣೀ ವಿಮರ್ಶಿನೀ
ಉನ್ನೀತಾ ಪಯಸೋಜಾತಾ
ಕಂಠಾಭರಣಾ ವಿಶುದ್ಧ ಸ್ಮರಣಾ.
ಮಧ್ಯಮಾ ಪಂಚಮಾ
ನೇತ್ರೋನ್ಮೀಲಿತಾ
ಸತೀ; ಸೀಮಂತಿನೀ
ಪಶ್ಚಿಮೇ ಉದಿತಾ
ಮುದಿತಾ
ಅಮೃತಸ್ರವಧಾರಾ
ವೈಖರೀ-ಧೀವರೀ
ನಿಷಾದಿನೀ-ವಾಗುರಾ
ಸಹಿತಾ
ಪಶುಪಾಶಹಿತಾ ವಿಹಿತಾ
ವಿಷಾದ ರಹಿತಾ
ಪೌಂಡ್ರಕ ದುಹಿತಾ
ಕುಣಿತಾ ಕುಣಿತಾ
ಅಟಂತೀ ಅರಣ್ಯೇ
ವಿದ್ಯಾರಣ್ಯೇ ಗುಹಾಹಿತಾಽ
ಅಮೃತೇಪಿಹಿತಾ
ಪಿಧಾನವತೀ ನವತೀ ಯುವತೀ
ಲೀನಾ-ನಾದಾಧೀನಾ.

ರಚನೆ : ೧೭-೭-೧೯೬೩

---

ಭಾವ : ಶರರೂಪವಾಗಿ ಹೊರಟ ಧ್ಯಾನವು ವಿದ್ಯಾರಣ್ಯಗುಹೆಯಲ್ಲಿ ಲೀನವಾದ ಅದ್ಭುತ. ಕವಿತೆಯ ಹಲವು ರೂಪಗಳ ಹಾಗೂ ಪರಾ, ಪಶ್ಯಂತಿ, ಮಧ್ಯಮಾ ಮತ್ತು ವೈಖರಿ ವಾಣಿಯ ವಿಲಾಸದ ವರ್ಣನೆ

ಶಬ್ದಾರ್ಥ : ನಂದಿನಿ=ವಸಿಷ್ಠ ಋಷಿಗಳ ಹೋಮದ ಆಕಳು. ಸುತ್ರಾಣಿ=ಇಂದ್ರ ಭೂಮಿ. ವಿವರ್ತ+ಆಭಾಸ=ಪ್ರಪಂಚವು ಪರಬ್ರಹ್ಮನಲ್ಲಿ ತೋರುವ ಅವಿದ್ಯಾನಿಮಿತ್ತಕವಾದ ಭ್ರಮ. ಸೀಮಂತಿನೀ=ಸ್ತ್ರೀ. ಪಶ್ಚಿಮ=ಜ್ಞಾನ ನೇತ್ರದ ಸ್ಥಾನ. ವಾಗುರಾ=ಬಲೆ. ವಿಧಾನವತೀ=ಯೋಜಕ ಸ್ತ್ರೀ. ಪೌಂಡ್ರಕ=ದೇಶವಾಚಕ. ದುಹಿತಾ=ಮಗಳು.



## ೨೮ ಬಂಧಮೋಕ್ಷ*

೧
ಸಾಕು ಭ್ರಾಂತಿಯ ಕಾವ್ಯ-ಬರಲಿ ಸಂಕ್ರಾಂತಿ
ಕಿಂಕ್ರಾಂತನಾಗದಿರು.
ಒಡಲ ಹಸಿವೆಗೆ ಕುಗ್ಗಿ
ಮಕರ ಸಂಕ್ರಾಂತಿಗಿದೆ ಹುಗ್ಗಿ!
೨
ಇಂದು ಬರಲಿದೆ ಕರ್ಕ ಸಂಕ್ರಾಂತಿ
ಗಂಗಾ ಸಂಗ
ಶ್ರಾವಣದ ಸಿಂಹಯೋಗದ ಹಾದಿ
ಈ ಗವಿಗೆ ಮರಳು ಹೆಜ್ಜೆಗಳಿಲ್ಲ
ಸಿಂಹವನು ಕಂಡವನು
ಸಿಂಹ-ಸ್ವಾಹಾಕಾರ.
೩
ಪಶುಗಳಲಿ ಹಾಹಾಃಕ್ಕಾರ !
ಪೌರುಷದ ಸತ್ತ್ವಕ್ಕೆ ಅಸ್ತಮಾನವು ಉಂಟೆ ?
ನಿಶೆಯ ತಮ ಕುಡಿಯಲಿದೆ
ಸಾಂಧ್ಯರಾಗವ ಸೇಂದಿ
ತಲೆ ತುಂಬ ನಕ್ಷತ್ರ-ನಿಃಪಕ್ಷವೀ ಕ್ಷೇತ್ರ.

೪

ಬಯಲಾಟದಲಿ ಹೊಕ್ಕು
ಹೊರಬರುವ ಹಕ್ಕು -ಹಕ್ಕಿಗಿದೆ ಆ ಸೊಕ್ಕು
ಭವಕೆ ಅಭವನೆ ಬೇಕು-ನೀಲಲೋಹಿತ ಕಂಠ
ರಜಸ್ತಮವ-ಅಂಧಂತಮವ
ಆಕಂಠ ಕುಡಿದ

೫

ದಶಕಂಠಗಿಲ್ಲ ಆರಾಮ.
ಸಂಹಾರ ವಿಶ್ರಾಮ,
ಜಯದ ವಿಜಯದ್ವಾರ-ಜಯ ವಿಜಯ ಆಕಾರ

೬

ಗರ್ಭದಲ್ಲಿದೆ ಸುಪ್ತ
ದಶೆ-ದೆಶೆಯ-ಅವತಾರ.
ಕಲಿಗು ಕಲ್ಕಿಗು ನಂಟು
ಬಿಚ್ಚಬಾರದ ಗಂಟು.

೭

ಅಲಕ್ಷ್ಯ ಸುಂದರನು-ಮಾಡಿದನು
ಕರ್ತರಿ ಯೋಗ.
ಬೇಕು ಕರ್ಮಣಿ ಪ್ರಯೋಗ
ಜ್ಞಾನಕ್ಕೆ ಸಂಬಂಧ-ಅಜ್ಞಾನವೇ ಬಂಧ !

- *'ಬಂಧ' ಎಂಬ ಶೀರ್ಷಿಕೆ ಇತ್ತು.

---

ಭಾವ : ವಿಡಂಬನ-ಪಿಶಾಚಿಗಳಿಗೆ ಪ್ರತಿ ವಿಡಂಬನೆಯ ವಿದೂಷಣೆ ಒಡ್ಡಲಾಗಿದೆ. ಬಂಧ ಹಾಗೂ ಮೋಕ್ಷ ಚಿಂತನೀಯ ವಿಷಯಗಳು. ಇವುಗಳ ವಿಡಂಬನೆ ಪುರುಷಾರ್ಥವಲ್ಲ. ಅಜ್ಞಾನವೇ ಬಂಧ; ಜ್ಞಾನವೇ ಸಂಬಂಧಮುಕ್ತಿ ಎಂಬ ಸಂದೇಶ ಮುಖ್ಯ.

## ೨೯ ಓವ್ವರ-ಹಾಲ

(ಉತ್-ಸಭಾ)

ಹಂಸನ ನಿರೀಕ್ಷೆಯಲಿ ಮತ್ತೆ ನೀರೂ-ಹಾಲು
ಓವ್ವರ-ಹಾಲು,
ಇಲ್ಲಿ ಕೆನೆಯುತಿದೆ ಹಾಲು; ಪಯದ ಹಯ್ಯಂಗವೀನ
ನಾಯಿಸ್ ಕ್ರೀಂ ಆಯಿಸ್ ಕ್ರೀಂ-ಎನುತ.
ಹುಳಿತದಲಿ ಹೆಪ್ಪುಗಟ್ಟದೆ ಹರಿತ?
ಕಡೆತದಲಿ ಕಡೆಗೋಲ ಸುತ್ತು ಕಣಕಣ-ಬೆಳ್‌ನೆಯ್
ಹೆತ್ತುಪ್ಪ ಬಿತ್ತು ಬೆಂಕಿಯಲಿ
ರೋಮಹರ್ಷಣದಲ್ಲಿ ನಾರದನ ಚೆಂಡಿಕೆಯು
ವಾಣಿಗೂ ವೀಣೆಗೂ ಸಾಕ್ಷಿಯಾಗಿದೆ-ಧ್ಯಾನ
ಘನದ ಘನ.
೨
ಕಿಂಚಿತ್ತು ಸತ್ತು ಉಳಿದಿದೆ ಸಾಯದೋ ಎಲ್ಲೊ?
ಶುಚಿ ರುಚಿಯ ಸೌಂದರ್ಯಸಾರ ಕೆತ್ತನೆಯಾಗಿ.
ಎಲೆಲೆ ಬೆಲ್ಲದ ಚವುಡಿ-ಉಡಿತುಂಬಿಕೊಂಬರೇ ?
ಮುಡಿಯ ಚಂದಿರ ಸೋನೆ
ಭರಣಿ ಮಂಟಪದಂದ ಹನಿಮುತ್ತು ದನಿಮುತ್ತು
ಚಿಚ್ಚಕೋರಿಯ ತುತ್ತು
ಹ್ರೀಂ ನಾಚು-ಲಾಜಾಹೋಮ
ಧೂಮ ಧೂಮ-ಕಣ್ಣೀರು-ಖೀರು-ಪಾಯಸ
"ಯತ್ರ ಯತ್ರ ಧೂಮಃ-ತತ್ರ ತತ್ರ ವಹ್ನಿಃ"

೩
ಕೊಪ್ಪರಿಗೆಯಲಿ ಹಾಲೆ-ಉಪ್ಪರಿಗೆಯಲಿ ಜ್ವಾಲೆ
ಕ್ಲೀಂ ಕ್ಲೇಶನಾಶಿನೀ ! ಹೃದಯವಾಸಿನೀ
ಉಧೋ ದೇವಿ-ನಾವು-ಬಂದರಕೆ ಬಂದೇವಿ
ನೀವಿಕೋಳಿ.
ಶಾರದೆಯ ಹಂಸಗಳು ಮರಿಳಿದವು
ತಾವರೆಗೊಳಕೆ ತುಂಬಿ ತುಂಬಾ ಫಲಕೆ
ಮಂದಾರ-ಗಾಂಧಾರ
ದರ್ಶನಕೆ ದಿವ್ಯ-ಶ್ರುತಿಗಾಧಾರ.

---

ಭಾವ : ಶ್ರುತಿ ವಿರುದ್ಧವಾದ ಶಾಬ್ದಿಕ ಅವಿವೇಕಗಳಿಂದ ನಡೆಸಿದ ಹಾವಳಿಯ ವಿದೂಷಣೆ ಇದೆ.

ಶಬ್ದಾರ್ಥ : ಹಯ್ಯಂಗವೀನ=ನವನೀತ, ಬೆಣ್ಣೆ, ಬೆಲ್ಲದ ಚವುಡಿ=ಸಿಹಿ ಮಾತನಾಡುತ್ತ ತುಡುಗು ಸಾಧಿಸಿಕೊಳ್ಳುವ ರೀತಿ. ನೀವಿಕೋಳಿ=ಸರಿಪಡಿಸಿಕೊಳ್ಳಿರಿ, ಸುಧಾರಿಸಿಕೊಳ್ಳಿರಿ.



## ೩೦ ಹೆಟರ-ಡೊಕ್ಸೀ

೧

ಹಾಕು ಮಣೆ
ಫ್ರೂಡು-ಆ್ಯಡ್ಲರು-ಯುಂಗು
ಹಚ್ಚು ಹಣೆ ಪಾದಕ್ಕೆ, ಬಂದ ಉಗುಳನು ನುಂಗು
ಪಿತಾ-ಪಿತಾಮಹಾ-ಪ್ರಪಿತಾಮಹಾ
ಶ್ರದ್ಧೆಯಿಲ್ಲದ ಶ್ರಾದ್ಧ, ಸರ್ವತೋ ಭದ್ರ!

೨

ಪೊಲಿಟಿಕ್ಸ್ ಮಿಸ್ಟಿಕ್ಸು ಮಿಕ್ಸು ಮಿಕ್ಸು
ಸೋಶಲ್ ಡಾಯನಾಮಿಕ್ಸು
ಡಾಯ್ನಮಾಯಿಟೀ ಭಿಕ್ಸು
ಶ್ರೇಯಾಂಸಿ ನೀಡಿದಾ ಇಕ್ಷುರಸವಲ್ಲ-ಭೋ!
ಪಾದರಸ, ಶ್ರೀಪಾದರಸ!

೩

ಆಲ್‌ಕೆಮಿಸ್ಟ್ರಿ Transforms History
into mere geography
spirit does not matter
mister! Silence is better.

೪
ಶಬ್ದವೇಧವ ಮಾಡಿ, ಶ್ರಾವಣನ ಕೊಂದ
ದಶರಥ ಪಡೆದ,
ದಶಮುಖಾಸುರನ ಕೊಲುವ ರಾಮನನು!
ಮರಮರನೆ ತಿರುಗಿ ಬರೆದನಾ ವಾಲ್ಮೀಕಿ
ರಾಮಾಯಣವ
ಸೀತಾ ಬಾ ಈ! ರಾಮಗಿದೆ ಅಗ್ನಿಪರೀಕ್ಷೆ
ಹೊಸ-ಪೊಸ-ದೀಕ್ಷೆ
ಹೃದಯಕ್ಕೆ ಹೃದಯವೆ ಸಾಕ್ಷಿ
ಬೇರೆ ಇಲ್ಲ proxy.

---

ಭಾವ : ಮಾನಸಶಾಸ್ತ್ರ ರಾಜ್ಯಶಾಸ್ತ್ರ ಮತ್ತು ಸಾಮಾಜಿಕ ಬದಲಾವಣೆಯ ಶಾಸ್ತ್ರಗಳಲ್ಲಿ ಶ್ರದ್ಧೆ ಇಲ್ಲದಿದ್ದರೆ ಎಲ್ಲ ಕ್ರಿಯೆ ವ್ಯರ್ಥ. ರಸವಿದ್ಯೆ ಪಾದರಸವಿದ್ಯೆಗಳ ಬಗ್ಗೆ ಮೌನವಾಗಿರುವದೇ ಯುಕ್ತ. ಶಬ್ದವೇಧ ವಿದ್ಯೆ ಮೋಸಮಾಡಿದ್ದಕ್ಕೆ ಶ್ರವಣಕುಮಾರನ ಮರಣವೇ ಸಾಕ್ಷಿ. ಬದಲಾವಣೆಯೆಂಬುದು ಅದಲು ಬದಲು ಸ್ಥಿತಿ. ಅದು ಹೃದಯವೇದ್ಯ.

ಶಬ್ದಾರ್ಥ : Politics=ರಾಜ್ಯಶಾಸ್ತ್ರ Mysticism=ರಹಸ್ಯಶಾಸ್ತ್ರ Social Dynamics=ಸಾಮಾಜಿಕ ಬದಲಾವಣೆಯ ಶಾಸ್ತ್ರ Alchemy=ರಸವಿದ್ಯೆ, ಕ್ಷುದ್ರ ಲೋಹ ಚಿನ್ನಗೊಳಿಸುವ ವಿದ್ಯೆ. Dynamite=ಪ್ರಬಲ ಸಿಡಿಮದ್ದು. Proxy=ಅದಲುಬದಲು, ಮೋಸ, ವಂಚನೆ. Heterodoxy=ತಿರಸ್ಕಾರಬದ್ಧಶಾಸ್ತ್ರ



## ೩೧ ಪೌಂಡ್ರಕ-ಪುಳಿಂದಕಂ

೧

ವಾಲ್ಮೀಕಿ ಬೇಡ। ಅವನು ಹುತ್ತಪ್ಪ
ನಾನು ಮೃಗಶಿರವ್ಯಾಧ
ಅಗಸ್ತ್ಯ ಗೋತ್ರ
ನ್ಯಾಯ ವೈಶೇಷಿಕದ ಬ್ರಹ್ಮಮೀಮಾಂಸೆ
ಸಾಂಖ್ಯಯೋಗದ ಭಾಷೆ.
ಆನಂದಘೋಷೆ-'ಬ್ಯಾಂ' ಎನ್ನುತಿದೆ ಮಂದಿ.

೨

ಅರವಿಂದ ನವನೀತೆ, ಭವ್ಯಭಗವದ್ಗೀತೆ
'ಹೂಜ ಹೂ' ರಸರಸವ ಮುತ್ತು
ಅದು ಮದ್ದು-ಮುದ್ದು
ತುಂಬಿಗುಂಜಾರವಕೆ ಗುಂಜಾಯಿಷೆಯು
ಬೇಕೆ ?
ಗಾಂಜಾ ಪ್ರಮತ್ತರಿಗೆ
ಕಂಡ ಕಾಣಿಕೆ ಏಕೆ ?
ಬಾ ಬಂಧು-ನಾನು, ನೀನೂ ಒಂದು
ಇದುವೆ ಕೂಡಲಸಂಗ
ವಿಟ್ಠಲ, ಅಭಂಗ.
ಓ ಮಹಾಶ್ವೇತೆ !
'ತವರತಿರಭವಿಷ್ಯತ್ ಪುಂಡರೀಕೇ ಕಿಮಸ್ಮಿನ್'
ವೈಶಂಪಾಯನದ ಗಿಳಿಯಲ್ಲ-ನಾನು ಕನ್ನಡವಕ್ಕಿ

೩

ಕಾದಂಬರಿಯ ಕುಡಿದಾ
ಚಂದ್ರಾಪೀಡಾ. ಎಲ್ಲಿಂದ ಬಂತು ಪೀಡಾ?
ಪತ್ರಲೇಖೇ ಬಾರೆ, ಬಾರೆ ಚಿತ್ರಲೇಖೆ.

೪

ತಾ ಕುಂಚ-ತಾ ಮಶಿಯ
ಬೆಳಕು ಹೊರಗೆಡಹುತಿಹ
ಸೋಮ ಚಾಪ ಜ್ವಾಲೆ.
ನೀನು ಉಷೆ-ನಾನು ಅನಿರುದ್ಧ
ನಿನ್ನ ಸಜ್ಜನಿಕೆಗಿಗೋ ಸೆಜ್ಜೆಸಾಲೆಗೆ ಬಂದೆ
ಬಾಣಾಸುರಗೆ ನೀಡಿದೆನು ಲಿಂಗ ಭಿಕ್ಷೆ
ಸಾಕಾಯ್ತು ಅಂಗದೀಕ್ಷೆ

೫

'ಓಂ ಭವತಿ ಭಿಕ್ಷಾಂ ದೇಹಿ'
ಅನಸೂಯೆ ? ಅತ್ರಿಗೋತ್ರದ ತಾಯೆ
ಧೂರ್ತೆಂದು ಬಂದನೀ ದತ್ತ
ಎತ್ತಿಂದೆತ್ತ !
ನೀನು ರಕ್ಷೆಯ ತಂದೆ
ಅದು ವಿಭೂತಿ.

೬

ಗೋಪಿಚಂದನದಲ್ಲಿ ಮೈನಾವತಿಯ ಮಾಯೆ
ಕಣ್ಣೀರು ಗುಳ್ಳೆಗುಳ್ಳೆ
ಮೈನಾ, ಮೈನಾ, ಮೈನಾಚುಂಗೀ, ಮೀರಾಕೇ ಪ್ರಭು
ಕಾಮಲತಾಂತಕುಡ್ಮಲವೆ !
ಕೂಡಲು ಒಲವೆ ? ಬೇಡಲು ಒಲವೆ ? ನೀಡಲು ಒಲವೆ ?
ಒಲವು ಲಿಂಗದಿ ಹರಿವ
ಜಲಹರಿಯ ಜಲವೆ-ಪಾವನವೇ
ಪವಿತ್ರವೇ !
ಅಗ್ನಿಯಲಿ ಸೋಮ-ಆಗ ಅಗ್ನಿಷ್ಟೋಮ.

೭
ನಾಡಿಗರ ಬಾಡಿಗೆಯ ಬಿಡಿಸಿ
ನಾಡಿಗೆ ಪಯಣ-ಸೀಮೆಗೆ ಭ್ರಮಣ
ಇವ ವಿರಕ್ತ ಶ್ರವಣ
ಅವರವರ ಸಂಸ್ಕಾರ ಅವರವರ ಆಕಾರ
ಉಲಿದುದೆಲ್ಲ ವಿಕಾರ
ಅರ್ಧಾರ್ಧ ಹಂಚದಿರು-ಪೂರ್ಣಕ್ಕೆ ಭಾಗವೇ ?
ಜಾಗೃತಿಗೆ ಜಾಗರವೆ
ಇದುವೆ ನಾಗರವೆ ?
ಮುದ್ರೆಯು ತಿರಸ್ಕಾರ
ಸಂಸ್ಕೃತಿಯು ಅಧಿಕಾರ !

---

ಭಾವ : ಸಾಕ್ಷಿ ಪುರುಷನ ಪೂರ್ಣಯೋಗ ಇದು ಮಾನವನ ಆದರ್ಶ. ಸಿಕ್ಕಾಪಟ್ಟೆ (Analysis, Synthesis) ಸಂಗಡಣೆ, ವಿಂಗಡಣೆಗಳ ಚದುರಂಗದಾಟದಲ್ಲಿ ಅದು (Endless Series of Matches) ವಿನೋದ (Past time) ಕಾಲಕ್ಷೇಪ ಮಾಡುವ ಮಹಾನಂದ ಬುದ್ಧಿ ಮಧ್ಯಸ್ತಿಕೆಯ ವಾಗ್ ವಿಲಾಸವು ದಾಯಾದಿತನಕ್ಕೆ ಉದ್ದೀಪನವಾದೀತಲ್ಲದೆ, ವಿಶ್ವಬಾಂಧವ್ಯಕ್ಕೆ ಹಿತಕರವಾಗಲಾರದು ಇದು. ಪೌಂಡ್ರಕ-ಪುಳಿಂದಕಂ ಎಂಬಲ್ಲಿ ಸಿಡಿಲಾಗಿ ಗುಡುಗಾಗಿ ಮಿಂಚಾಡಿದೆ.

ಶಬ್ದಾರ್ಥ : ಮೃಗಶಿರ=ಜಗತ್ತಿಗೆ ಬೆಳಕನ್ನು ಕೊಡುವ ನಕ್ಷತ್ರ. ಬೇಡನಾದ ವಾಲ್ಮೀಕಿ ಪಶುತ್ವವನ್ನು ಕಳೆದುಕೊಂಡು ದೇವತ್ವ ಪಡೆದ. ಕುಡ್ಮಲ=ಅರಳುಮೊಗ್ಗೆ.

ವಿಶೇಷ : ಪೌಂಡ್ರಕ ವಾಸುದೇವ ಎಂಬ ಕಪಟ ಕೃಷ್ಣವೇಶಧಾರಿ ರಾಜನಿದ್ದ.



# ೩೨ ಮಹಾತ್ಮ ವಚನ

೧

'ಭಕ್ತಿ ಭಂಗಿಯ ಮಗಳು'
ಅಧ್ಯಕ್ಷಳಾಗಿಹಳು, ಈ ಅಭಂಗಿತ ರಾಷ್ಟ್ರ ಕ್ಷೇತ್ರಕ್ಕೆ.
ಪ್ರಜೆಪ್ರಜೆಗೆ ಸ್ವಪ್ರಜ್ಞೆ ಉದಯಿಸದೆ ಸ್ವಾರಾಜ್ಯ ನಡಿಸದಲೆ.
ಏಕರಾಟ್ ಭೂಮಂಡಲದ ವಿಶ್ವಸಭೆಯಲ್ಲಿ
ನಿದ್ದೆ ನಿಃಶ್ವಾಸಗಳ ಆಶ್ವಾಸನಕೆ
ಬಾಯಿಲ್ಲವಯ್ಯ
ಬಿನ್ನಹಕೆ-ಬಿನ್ನಣಕೆ.

೨

ಬಿನ್ನಾಯಕೋ ನಾಯಕೋಪನಾಯಕರೆಲ್ಲ
ಎಲ್ಲೆಲ್ಲೋ ಊಟ ಮಾಡುವರು
ದಿಗ್ ದೇಶವಿಚರಂತಿ.
ಸ್ಥಿರಕೆ ಇದೆ ರಸದೂಟ
ವ್ಯಭಿಚಾರಿಗೋ ವಿಷ-ಕಾಳ-ಕೂಟ !

೩

'You Know' 'I Know' - The World does not know
ನೋಪೇನು, ನೋಗೇನು, ನೋನಾಟಕದ ಭಂಗಿ
ನೋಕಷಾಯ.

೪

ನೋವಿಲ್ಲ, ನೋಂತಿಲ್ಲ-ಬರಿ ಕಬಂಧಚ್ಛಾಯ.
ಕೈ ಬಾಯ ಹೊಯ್ದಾಟವಾಯ, ವಾಯಸದಾಯ.
ಪುರುಷ ನರ್ತಿಸುತಿರಲು ಪ್ರಕೃತಿಮಂಡಲಕೆ ಸಾಕ್ಷಿತ್ವ
ಉದಾಸೀನ-ಸಭಾಸದ-ಭಾಸ-ಆಭಾಸ
ಆಹಾರ-ನಿದ್ರಾ ಭಯ-ಮಿಥುನ
ಮಿಥ್ಯಾಚಾರ

೫

ಚಾತುರ್ಯ-ಚಾರುತ್ವ-ಚಾರಿತ್ರ್ಯ ಭಂಗಿಸುವ
ಪಂಚತ್ವದಾಚಾರ.
ಬಾರೆ ತಾರಕ ಪ್ರಜ್ಞೆ-ಅಭಿಜ್ಞೆ-
ಸಾಕೋ ಘಟೋತ್ಕಚ ಸಂಜ್ಞೆ.
ವತ್ಸಲಾಹರಣವನು ಅಭಿಮನ್ಯು ಮಾಡನೇ ?
ಇದು ಕೃಷ್ಣ ಸಂಧಾನ !

೬
ಭಕ್ತಿ-ಭಂಗಿಯ ಮಗಳು
ಯುಕ್ತಿ ಅನುಸಂಧಾನ.
ಗಂಗೆ ಭಂಗಿಯ ಮಗಳು
ಇಲ್ಲ  ಯಮುನಿಯ ಮಗಳು
ಯಾ ಸಭಂಗಿಯ ಮಗಳು
ಮಲ ತೊಳೆದು ನಿರ್ಮಲಳು
ನಿಷ್ಮಿಮಿತ ಜೀವಿತಳು
ಮೂಲೋಕಸೂತ್ರಧಾರಕಳು.
೭
ಇದು ಆಕಳೋ ಆಕಳು!
ಕಾಮವೃಷಲರ ವೃಷಭ
ಡುರಕಿ ಹಾಕುತ್ತಿಹುದು
ಬ್ರಹ್ಮಚರ್ಯದ ಹೋರಿ
ಎಲ್ಲಿಹುದು ಶಿವಶಿವಾ?
೮
ದಾರೋ ಎಲ್ಲೊ ಲೋಥಲಿನಲ್ಲೋ!
ಹುಗಿದರೋ ಲಾಂಗು-ಲಗಾಮು.
ಹಿರೋಶಿವಾ ವಿಕೃತ ಪ್ರಜೆಗಳೇ ಬೇಕೆ?
ಭೂಕಂಪ-ಅನುಕಂಪ
ಬಾರೋ ಜಗತ್ ರಝಂಪ.

---

ಭಾವ : ಗತ ಸಂಸ್ಕೃತಿಗಳ ತಿರುಳನ್ನು ಅರಿತುಕೊಂಡು, ಹೊಸ ಸಂಸ್ಕೃತಿಯ ಉದ್ಭವಕ್ಕೆ ಹಾದಿ ಮಾಡಿಕೊಡಬೇಕಾಗಿದೆ. ಪ್ರಜೆಗಳಲ್ಲಿ ಸ್ವಪ್ರಜ್ಞೆ ಒಡಮೂಡುವುದು ಅವಶ್ಯ.

ಶಬ್ದಾರ್ಥ : ಭಂಗ=ಸೀಳುವಿಕೆ, ಅಪಜಯ, ನಾಶ, ಕಷ್ಟ, ಅವಮಾನ. ಅಭಂಗಿತ=ಅವಿಭಜಿತ, ಭಂಗಿಆಗದ. ಕಷಾಯ=ಮೂಲಿಕೆಗಳಿಂದ ತೆಗೆದ ರಸ, ಔಷಧ. ಕಬಂಧ=ತಲೆ ಇಲ್ಲದ ದೇಹ. ವಾಯಸದಾಯ=ಕಾಗೆಗಳ ಹಾರಾಟ. ಪಂಚತ್ವ=ಪ್ರಾಣ ಕಳೆದುಕೊಳ್ಳುವದು. ವೃಷಲ=ಶೂದ್ರ. ಲೋಥೆಲ್ಲ=ಇಂಡಸ್ ಕಣಿವೆಯ ಉತ್ಖನನದ ಸ್ಥಳ, ಭೂಕಂಪವಾದ ಸ್ಥಳ. ಲಾಂಗುಲಗಾಮು=ಹಿಡಿತ. ಝಂಪ=ಬಹಾದ್ದೂರ.

ವಿಶೇಷ : ಜಪಾನಿನ ಶಿಂತೋಧರ್ಮ ದೇವತೆಯ ಆರಾಧನೆಯ ಕಾಲಕ್ಕೆ ಅಭಿನಯಿಸಲಾಗುವ ನಾಟಕ - ನೋ ನಾಟಕ. ಇವು ಮೌನ ನಾಟಕಗಳು. ಭಾರತದ ಪ್ರಜೆಗಳ ಸ್ಥಿತಿ ಈ ಮೌನ ನಾಟಕಗಳಂತಾಗಿದೆ.

## ೩೩ ದಾರಿಗದಾರೋ

೧

ನೀನದಾರೋ ? ನಾನದಾರೋ ? ಮೋಹೆಂಜೊದಾರೋ ?
ಹೋದವರು ಮರಳಿ ಬರಲಿಲ್ಲಾ
ಇದ್ದವರು ಇಂದಿನವರಲ್ಲಾ
ಮುದ್ರೆ ಏನೋ ಭದ್ರ
ಅನರ್ಥಿಸದೆ ಅರ್ಥ ಕಂಡಿಲ್ಲಾ
ಗುರುವು ಶಿವ, ಕುರುಹು ಶವ
ಪಶುಪತಿಯ ಸುತ್ತಲೂ ಪಶುಗಳೆಲ್ಲಾ
ಹೂಳಿದರ್ಥವ ತೆರೆದು ಪಡೆದುದೇನು ?
ಶಕಲ..... ವಿಕಲ.....

೨

ವರ್ತಮಾನದ ಎದೆಯಮೇಲೆ ಭೂತ
ಸತ್ತದ್ದು ಸಾಯಲೊಲ್ಲಾ
ಬದುಕಿದ್ದು ಬಾಳಲೊಲ್ಲಾ
ಬಿದ್ದುಕೊಂಡಿದೆ ಹಾದಿ
ನಿಂತುಕೊಂಡಿದೆ ಕಂಬ
ಕಾಲಿಗೋ ಕಣ್ಣೆ ಇಲ್ಲಾ.
ಕಣ್ಣು ಬರಿ ಕನಡಿ
ಮುಂದೆ ನಡಿ ಮುಂದೆ ನಡಿ
ಹಿಂದೆ ಚಬಕ
ಇಂದ್ರಜಾಲದ ತಬಕ
ಮುಗಿಲತುಂಬಾ
'ಟಿಂವಕ, ಟಿಂಬಕ, ಜಗದಂಬಾ'.....

೩
ನಿರ್ಬೀಜ ನಿರ್ಬೀಜ
ಬರಿ ಗೊಬ್ಬರಾ
ಕ್ರಿಮಿಕೀಟಗಳ ಕ್ಷೇತ್ರ
ಒಬ್ಬರೊಬ್ಬರ ಮೇಲೆ
ಲಿಂಗ ಭಂಗ, ಅಂಗ ಸಂಗ
ಹರಹರಾ, ಪಾಪದೂರಾ
ಹೊಲಗೇರಿ ಒಳಗೇರಿ
ನಡುವೆ ಮಾರಿ!
ನಡುವೆ ಹೆಣ ಹೊತ್ತಿರುವ
ಹೆಣದ ದಾರಿ.
ಮಣ್ಣೆನೊಲು ತಣ್ಣಗಿದೆ
ಇಲ್ಲಿ ಭ್ರಾಂತಿ, ಶಬ್ದ ಶಾಂತಿ.
೪
ಮನ್ಮಥನ ಮಥನದಲಿ ಅಗ್ನಿಬಿಂಬಾ
ಹಿಂದಿನದು ಹಾಳುಕಥೆ
ಇಂದಿನದು ಬಾಳ ವ್ಯಥೆ
ಕಿಸ್ಮತ್ತಿಗಕಸ್ಮಾತ್ತು ಮರಣಮೌನ
ಪಡುವಣದ ಕಡಲಲ್ಲಿ ಅಸ್ತಮಾನದ ಬೇಗೆ
ಮೂಡಲಲಿ ಬುಜುಬುಜೂ ಹುಳದ ಹುತ್ತ
೫
ಹೊತ್ತಿತೆಲ್ಲೋ ಬೆಂಕಿ
ಇವು ಅದರ ಸುತ್ತ
ಹತ್ತುಕಡೆ ರೆಕ್ಕೆರಾಶಿ,
ಮೂರು ಗಳಿಗೆಯ ಮೋಜು
ಮುಕ್ತಿ ಕಾಶಿ.

೬
ಶ್ರುತಿಗೊಡುವ ಕಿವಿಯೆ ಇಲ್ಲಾ
ಮೋಡಿಕಾರರ ಸಂತೆ ಯಂತ್ರ ತಂತ್ರ
ನಡುನಡುವೆ ಮುರುಕು ಮಂತ್ರ.
೭
ಭಾರತದ ಭಾರತಿಗೆ ಉತ್ತರವೆ ಇಲ್ಲಾ
ಪ್ರಶ್ನೆಯೆಲ್ಲಾ.
ಉದ್ಗಾರ ಸಾಲುಸಾಲೇ
ಪ್ರಶ್ನೆಗಳ ಮಾಲೆಮಾಲೆ.

---

ಭಾವ : ಸ್ವತಂತ್ರ ಭಾರತದಲ್ಲಿ ಉದ್ಗಾರ ಹಾಗೂ ಪ್ರಶ್ನೆಗಳ ಸರಮಾಲೆ ಇದೆಯೇ ಹೊರತು ನಿಜವಾದ ಉತ್ತರವೇ ಇಲ್ಲಾ. ಜವಾಬುದಾರಿಯನ್ನು ಹೊರಲು ಯಾರೂ ಸಿದ್ಧರಿಲ್ಲ. ಒಬ್ಬರಿಂದೊಬ್ಬರಿಗೆ ಜವಾಬುದಾರಿ ಹಾರುತ್ತ ನಡೆದಿದೆ. ಮಣ್ಣು ಬೂದಿ, ವಿಭೂತಿಗೆ ಹಾದಿ ಮಾಡವು. ಸಂಸ್ಕಾರದ ಸಂಸ್ಕೃತಿಯ ಮಾರ್ಗ ಹುಡುಕಬೇಕಾಗಿದೆ.

ಶಬ್ದಾರ್ಥ : ಶಕಲ, ವಿಕಲ=ಚೂರು ಚೂರು, ತುಂಡು ತುಂಡು. ಕಿಸ್ಮತ್=ದೈವ. ಅಕಸ್ಮಾತ್=ಹಠಾತ್ತಾಗಿ, ಒಮ್ಮಿಂದೊಮ್ಮೆ



# ೩೪ ನಿರ್ಬುದ್ಧ

೧

ನಾವು ಪೂಜಿಸುತಿಹುದು ಹೊಟ್ಟೆಕಿಚ್ಚು
ಬೇರೆ ಎನ್ನುವುದೇಕೆ 'ಬೆಂಕಿ ಹಚ್ಚು?'

೨

ಕೊಲ್ಲುವೆವು ಸಾಯುವೆವು ಇದೆ ಕಾಯಕ
ತಲೆಗೆ ಬೆಲೆಯೆಷ್ಟು ಕೇಳುವ ನಾಯಕ!

೩

ಭೂಮಿ ಎಂಬುದು ಮಣ್ಣು, ಪ್ರಜೆ ಎಂಬುದೂ ಮಣ್ಣು
ಸುಡುಗಾಡು ನಾಗರಿಕತೆ

೪

ಒಳಗೆ ಮಸೆಯುತ್ತಿಹುದು ಶಸ್ತ್ರಾಸ್ತ್ರ ಒಳಸಂಚು
ಹೊರಗೆ ಶಾಸ್ತ್ರದ ಪಾಠ ಪ್ರವಚನಗಳು.

೫

ವಚನ ವಾಚನವೇನು? ವಚನ ಗಾಯನವೇನು?
ವಚನ ಮುರಿಯುವುದೊಂದೆ ರಚನಾಕೃತಿ.

೬

ಗುಂಪು ಗುಂಪಿನ ರಾಜಕಾರಣದ ತಂತ್ರದಲಿ
ಹಂಪೆಯಾಯಿತು ಕೊಂಪೆ-ಹಳೆಯ ಮಾತು.

೭

ರಾಮರಾಜನ ರುಂಡ ಕಲ್ಲಾಗಿ ಬಿದ್ದಿಹುದು
ಎಲ್ಲರ ಪ್ರದರ್ಶನಕೆ ವಸ್ತುವಾಗಿ;

೮

'ಹಲ್ಬಿದಾಯಿ' ಆಗಿಹೋಯ್ತು ಆದಿಲ್‌ಶಾಹಿ
ಹೊಳೆಗೆ ಹೋದವು ದೇವರು.

೯

ಕಬರ ಕಬರೀಭಾರ, ಕವಡಿ ಕೊರಳಿಗೆ ಬಂತು
ಯಾ ಕಪರ್ದಿಯ ಬೂದಿ ಈ ವೈಭವ?

೧೦
ರಾಮನತ್ತರು ಚೆಂದ, ಕೃಷ್ಣ ಅತ್ತರು ಚೆಂದ
ಇದ್ದವರ ಬಾಯಿಗೋ ಉಳ್ಳೆಗಡ್ಡಿ.

೧೧
'ಯಜ್ಞ' ಆದರೂ ಏನು? ಹೋಮ ಹೋದರು ಏನು ?
ಕುರಿಯು 'ಬ್ಯಾಂ' ಎನ್ನುವುದು ತಪ್ಪಲಿಲ್ಲ.

೧೨
ನಮ್ಮ ದೇವರು ಹೆಚ್ಚು ನಿಮ್ಮ ದೇವರು ಹೆಚ್ಚು
ದೀಪ ಹಚ್ಚುವ ಕೈಯು ಕೊಲೆಗೆ ಬದ್ಧ.

೧೨
ಬುದ್ಧನೇ ನಿಜವಿರಲಿ, ಸಿದ್ಧನೇ ನಿಜವಿರಲಿ
ಇತಿಹಾಸ ತಿಳಿಯದವ ಶುದ್ಧ ನಿರ್ಬುದ್ಧ.

---

ಭಾವ : ಅಸೂಯಾ ಪೂಜೆ ಮೈತ್ರಿಯ ಪ್ರಸ್ತಾವನೆಯಲ್ಲ. ನಮ್ಮ ಇತಿಹಾಸ ಪುರಾಣಗಳಿಂದ ವೇದವಿದ್ಯೆಯನ್ನೇ ವಿಕೃತಗೊಳಿಸಿದರೆ, ವಿಶ್ವಸಾಹಿತ್ಯ ಬರಲಾರದು. ಸಾಮಾಜಿಕ, ರಾಜಕೀಯ ದ್ವೇಷೋದ್ದೀಪನಕ್ಕೆ ಇತಿಹಾಸ ದರ್ಶನವು ಹಾದಿಯಾಗಬಾರದು. ಅದು ಸ್ಮಶಾನದ ಹಾದಿ-ಹಿರೋಶಿಮಾ ಹಾದಿ. ಈ ಮೋಕ್ಷಕ್ಕೆ ಅರ್ಥ ಉಂಟೆ? ಚಿಂತನೀಯ.



# ೩೫ ಇದು ಯುಗಾದಿ

೧
ಆವರವರಿಗೆ ಅವರ ಹಾದಿ
ನಿನಗೆ ನನಗೆ ಒಂದೆ ಆದಿ-ಒಂದೆ ದಾದಿ
ಯುಗದ ಮಧ್ಯಬಿಂದು ಒಂದು.
೨
ಇದು ಯುಗಾದಿ
ಆಗಿರು ಸಂವಾದಿ
ಏಕೆ ವಾದ ಬೇದಿ ?
ಸಾದಿ ನಮ್ಮ ಹಾದಿ ತಮ್ಮಾ
ಯಾಕೆ ಕೆಡುವೆ ಕಾದಿ ?
ನಿನ್ನ ಪಾಡು ನಿನ್ನ ಜಾಡು
ವಿರಸ ನಿನಗನಾದಿ.
೩
ಮೊನ್ನೆ ಮೊನ್ನೆ ಬೂದಿಯಾದಾ
ಹೋಳಿಯಲ್ಲಿ ಕಾಮಾ
ಚೈತ್ರಗೌರಿ ಹೂತಳಣ್ಣಾ
ನೆನೆದು ಶಿವನ ನಾಮಾ
ಮಾಧವನಾ ರಾಸಲೀಲೆ-
ಗಿದೇ ಋತುವು ಹದವು
ಸುಂಟ್ರುಗಾಳಿ, ಅಡ್ಡಮಳೆ
ತೆರೆದಿತಕ್ಕಾ ಕದವು.
ಚಿಗುರು, ಹಸಿತು, ಬಲಿತು, ಹಳಿತು
ಎಲೆ ಎಲೆ ಎಲೆ ಉದುರಿತು
ಫಲ ಸಿಡಿದಿತು ಬೀಜ ಬೀಜ
ಅದು ಎಲ್ಲೋ ಚದುರಿತು.

೪
ಆದಿ ಇಲ್ಲ ; ಅಂತ್ಯ ಇಲ್ಲ
ಮಧ್ಯೆ ಯಾವ ಹಾದಿ ?
ಯುಗ ಯುಗಗಳ ವಿರಹದೊಳಿದೆ
ಪ್ರೀತಿಯಾ ಬುನಾದಿ.
ನನ್ನುಸುರಿಗೆ ನಿನ್ನುಸಿರೆನು
ಸಂಗಡಿಸು ಸಮಾಧಿ.
೫
ಶ್ರಾವಣದಲಿ ಶ್ರವಣಸುಖ
ಮಾಘದಲ್ಲಿ ಅನಘಮುಖ
ಆಶ್ವಿನ ರವಿ ಚೈತ್ರ ಚಂದ್ರ
ಪರಸ್ಪರರು ಅಭಿಮುಖ.
ಮಧು ಮಾಧವ ರಾಧಾ ರತಿ
ವೈಶಾಖಿಯ ಋತು ಸತ್ಕೃತಿ
ನೈಸರ್ಗಿಕ ವೈಸರ್ಗಿಕ
ಛಂದೋಮಯ ಪ್ರತಿಕೃತಿ.
೬
ಕವಿಯಾಗಿಯೆ ಹೇಳುತಿರೋ
ಕಿವಿಯಾಗಿಯೆ ಕೇಳುತಿರೋ
ಭವ ಭವ ಭವ ಮೋಚನವಿದೆ
ಸವಿ ಸವಿ ಸವಿದೇಳುತಿರೋ
ಸಾಯಕನೋ ಈ ಪ್ರಪಂಚ
ಗಾಯಕನಿಗೊ ಇದೆ ವಿಪಂಚಿ
ಮಾಯದ ಕಾಯ್ ಮಾಗುವದೋ
ಅರಸು ಅಂಚಿ ಹಂಚಿ ಹಂಚಿ
ಸರಸಿಯೊಳಗೆ-ಹೊಂಚಿ.

೭
ಹಾದಿಯೆಂದು ಹಾಯಬೇಡ ಯಾವುದೋ ಯುಗಾದಿ
ಯುಗಲ ಯುಗಲ ವಿರಹದೊಳಿದೆ ಪ್ರೀತಿಯೂ ಬುನಾದಿ
ಸತ್ತಿನ ಗತ್ತಿನ ಗಮಕವು ಭಾವರಸ ಸನಾದಿ
ಛಾಂದಸಿಕತೆ ಮುಕ್ತಮಾರ್ಗ? ಶ್ರುತಿ-ಕೃತಿ ಸಂವಾದಿ.

---

ಭಾವ : ಸಾದಿ=ಸಾಹಿತ್ಯದ ಮಾರ್ಗ ನಮ್ಮ ಹಾದಿ ಎಂದಿದ್ದಾರೆ ಬೇಂದ್ರೆ. ಆದಿ ಸಮೇತವಾದುದು ಸಾದಿ. ಮತ ಸಂಬಂಧವಾದ ಚರ್ಚೆಗಳಲ್ಲಿ ಜಗಳಗಳಲ್ಲಿ ಬೇಂದ್ರೆಯವರಿಗೆ ಆಸಕ್ತಿ ಇರಲಿಲ್ಲ. ಪ್ರತಿಯೊಂದು ಮತಕ್ಕೂ ಆದರದರ ಆದಿ ಉಂಟು. ಅದು ಅವರವರ ಹಾದಿ. ಆದಿ ಇಲ್ಲದ ಅನಾದಿ ಹಾದಿಯ ಮೂಲಸ್ವರೂಪ ಇದ್ದುದನ್ನು ಗಮನಿಸಬೇಕು ಎಂಬ ಸೂಚನೆ ಈ ಕವನದಲ್ಲಿದೆ.

ಶಬ್ದಾರ್ಥ : ವೈಸರ್ಗಿಕ=ಅಭಿವ್ಯಕ್ತಪಡಿಸಿದ. ಯುಗಲ=ಜೊತೆ.

ವಿಶೇಷ : ನುಡಿ-೫ : ಶ್ರಾವಣದಲ್ಲಿ ವೇದಶ್ರವಣದ ಸುಖ, ಮಾಘಮಾಸದಲ್ಲಿ ಪಾಪ ಕಳೆದುಕೊಳ್ಳುವ ಸ್ನಾನದ ಸುಖ ಪಾವಿತ್ರ್ಯದ ಮಾರ್ಗ. ಆಶ್ವಿನದ ರವಿ ಮತ್ತು ಚೈತ್ರದ ಚಂದ್ರ ಆಹ್ಲಾದಕಾರಕ. ಶ್ರಾವಣದಲ್ಲಿ ಸೂರ್ಯ ಕಾಣುವದಿಲ್ಲ. ಮಾಘದಲ್ಲಿ ಸೂರ್ಯ ಕಂಡರೂ ಚಂದ್ರನಂತೆ ತಂಪಿರುತ್ತಾನೆ. ವರ್ಷದ ಪ್ರತಿ ತಿಂಗಳ ವೈಶಿಷ್ಟ್ಯಗಳ ವರ್ಣನೆ ಇಲ್ಲಿದೆ.



# ೩೬ ಚೈತನ್ಯದ ಪೂಜೆ

ಚೈತನ್ಯದ ಪೂಜೆ ನಡೆದSದ
ನೋಡS ತಂಗಿ ॥ ಅಭಂಗದ ಭಂಗೀS ॥ ಪಲ್ಲವಿ ॥
೧
ಸೌಜನ್ಯ ಎಂಬುದು ಮೊದಲನೆ ಹೂವು
ಅರಳೋಣ ನಾವೂ ನೀವೂ
ಸಾಮರ್ಥ್ಯ ಎಂಬುದು ಬೆಲಪತ್ರಿ
ಶಿವಗರ್ಪಿತ ಇರಲಿ ಖಾತ್ರಿ.
೨
ಸತ್ಯ ಎಂಬುವ ನಿತ್ಯದ ದೀಪ
ಸುತ್ತೆಲ್ಲಾ ಅವನದೇ ರೂಪ
ಪ್ರೀತಿ ಎಂಬುವ ನೈವೇದ್ಯ
ಇದು ಎಲ್ಲರ ಹೃದಯದ ಸಂವೇದ್ಯ.
೩
ಸೌಂದರ್ಯ ಧ್ಯಾನಾ ಎದೆಯಲ್ಲಿ
ಅಸ್ಪರ್ಶಾ ಚಿನ್ಮಯದಲ್ಲಿ
ಆನಂದಗೀತ ಸಾಮSವೇದಾ
ಸರಿಗಮ ನಾದಾ.
೪
'ಉದ್ಭವ' 'ಉದ್ಭವ' ಹೇ ಮಂಗಲ ಮೂರ್ತಿ
ಅಲಲಾ! ಅಹಹಾ! ಅಮಮಾ!
ಆತ್ಮಾ ಪರಮಾತ್ಮಾ ಅಂತSರಾತ್ಮಾ
ಘನಮೋ ಘನ! ನಿಮ್ಮಾ ಮಹಿಮಾ!

---

ಭಾವ : ಜಾಗತಿಕ ಸಾಮರಸ್ಯಕ್ಕೆ ಸೌಜನ್ಯದ ಸಾಮರ್ಥ್ಯ; ಸತ್ಯದ ಪ್ರೀತಿ ಹಾಗೂ ಸೌಂದರ್ಯದ ಆನಂದ ಎಂಬ ಜೀವನ ಮೌಲ್ಯಗಳ ಆಚರಣೆ ಅವಶ್ಯ. ಇದರ ಸಿದ್ಧಿ ಆತ್ಮಾ, ಅಂತರಾತ್ಮಾ ಮತ್ತು ಪರಮಾತ್ಮ ಇವರ ಐಕ್ಯದ ದರ್ಶನ. ಚೈತನ್ಯ (Energy) ಇದು ವಿಶ್ವವ್ಯಾಪಿ.

ಶಬ್ದಾರ್ಥ : ಉದ್ಭವ=ಉತ್ಪತ್ತಿ, ಒಡಮೂಡುವಿಕೆ, ಅರೂಪ ರೂಪವಾಗಿ ಪ್ರತ್ಯಕ್ಷ ಆಗುವಿಕೆ.

ವಿಶೇಷ : ಬೇಂದ್ರೆಯವರು ತಮ್ಮ ಪ್ರಥಮ ಮೊಮ್ಮಗ ಚಿ.ಪ್ರಭಾಕರನ ಧ್ಯಾನಕ್ಕಾಗಿ ರಚಿಸಿದ ಸಾಧನಾಗೀತ ಇದು.

## ೩೭ ಪಂಚಾರತಿ

೧

ಒಲಿ ಹೊತ್ತಿಸಬೇಕಮ್ಮಾऽ
ಅಡಗಿऽऽ ಮನಿಯೊಳಗऽ
ಅನ್ನಾऽ ಎಡಿಮಾऽಡऽಬೇಕऽ
ಅನ್ನऽ ದಾನೀಶ್ವರಗऽ
ಘುರು ಘುರು ಅಂತಾऽऽನ
ಉರಿನಾಲಗಿಯವನऽ ಶಿವನऽ
ತವರು ಮನೆಯವರುಽ ಯಾರು
ಬರತಾऽರೋ ಕಾಣೆऽ ?
ನಮ್ಮಾವಾऽ ಹೇಳೋ ತಾಯೀ ತಮ್ಮಾ
ದೇವನ ಆಣೆ.

೨

ನಾಲ್ವರು ಬರಲಿऽ ಕೂಡಿ
ಕೂಡಿ ಎಡಿಮಾಡೀ ನೋಡಿ
ಮಿತ್ರಾರು ಅಯ್ಯನವರುऽ
ವರುಣನ ಕಡೆಯವರು
ಭಗಭಗ ಅಂದऽರೆ ಸೌಭಾಗ್ಯ
ತರತೇನಿ ಅನ್ನುವರು.
ಸೋಮಾऽ ಬಾರಯ್ಯ
ಸಾಮಾऽಗಾನಾऽ ಹಾಡಿ
ಅವರ ಹಂತಿಲೇ ನೀನೂ
ಮೂಡು ಊಡು.

೩

ದೇವರ ಮನಿಯಾ ದೀಪಾ
ಬೆಳಗಿಸಬೇಕऽ
ಮಕ್ಕೂ ಕಳೆದೂ ಎಣ್ಣೀ ಹಣಿ ಹಣಿಸಿ
ಬತ್ತೀ ತಳಿಸಿ
ಮೈಮಣಿಸಿ ಎದಿದುಂಬಿ ಕೈಮುಗಳು
ನೀಡೀ ಬೇಡೀ ಬೇಡಿ.

೪
ಒಲಿಯೋ ಒಲಿ ಅನ್ನದ ಗಡಗೀಯೊಳಗೂ
ಕೋಡೊಲಿ ಕೆಳಗೂ
ಹೊತ್ತೊತ್ತಿಗೆ ಭಕ್ತಿ
ಯುಕ್ತಿ ಹೊಳಿಸೋ
ಅಡಗಿಯ ಮನಿಯವನ
ಬಲ್ಲವನऽ
ರಸರುಚಿಪಾಕಾ
ಎಲ್ಲವನ ಅರಿತವನ
ನಮ್ಮ ಮಾತು ಧಾತೂ
ಹೂತು ಬೆರಿತವನ.
೫
ಹಂಗಿನ ಅರಸನಿಗಿಂತ ಇಂಗಡಲಿನ
ಒಡಲಿನ ಬಡವಾ
ವಡವಾ ಬಡವಾ ತಂಗೀ
ಅಡಗೀ ಮಾಡವ್ವಾ.
ಕೊಡುವಾ ಎದಿ-
ಹಾಲಿನ ಕೊಡವಾ.
॥ ಓಂ ತತ್ ಸತ್ ಗುರುಭ್ಯೋ ನಮಃ ॥

---

ಭಾವ : ಒಲಿಯೊಳಗಿನ ಬೆಂಕಿ, ನೆತ್ತಿಯ ಮೇಲಿನ ಸೂರ್ಯ, ದೇವರ ಮನೆಯೊಳಗಿನ ದೀಪ, ಅನ್ನದೊಳಗಿನ ರಸರುಚಿ ಮತ್ತು ಕ್ಷೀರಸಾಗರದೊಳಗಿನ ಅಮೃತ ತತ್ತ್ವ ಈ ಐದೂ ಬೆಳಕಿನ ರೂಪಗಳೆ. ಈ ಪ್ರಜ್ಞೆ ಗುರುಗಳಿಂದ ಪಡೆದದ್ದಕ್ಕಾಗಿ ನಮನ ಸಲ್ಲಿಸಲಾಗಿದೆ.

ಶಬ್ದಾರ್ಥ : ಇಂಗಡಲು=ಕ್ಷೀರಸಾಗರ.

## ೩೮ ಎದೆಯ ಒಕ್ಕಲಿಗನ ಹಾಡು

೧

ತತ್ ಎನ್ನು ತತ್ತಿಗೆ। ಬಿತ್ತೆನ್ನು ಬಿತ್ತಿಗೆ
ಸತ್ ಎನ್ನು ಕುತ್ತಿಗೆ-ಮುತ್ತಿಗೆ
ಮಿಂಚಾದ ಚಿತ್ತಗೆ। ಸ್ವಾತಿ ತುಟಿಮುತ್ತಿಗೆ
ನೇಸರು ಏರಿದನೊ। ನೆತ್ತಿಗೆ
ನೀರಿಗೆ ಬಿಡು ಹೋರಿ, ಎತ್ತಿಗೆ.

೨

ಎದೆಯ ಕಮ್ಮಟದಾಗ, ಒಲುಮಿಯ ಕುಲುಮಿಯೋ
ಅಡಿಗಲ್ಲ ವ್ಯಾಲೈತಿ ಸುತ್ತಿಗೆ
ಹೊತ್ತಿಗೆ ಹೊತ್ತಿಗೆ। ಢಣಾ ಢಣಾ ದೀಪಾ-ಗಂಟೆ
ಒಲವಿನ ಬಲ ಐತಿ ಜತ್ತಿಗೆ
ಬಾರಣ್ಣ ಬಾ ತಮ್ಮ ಒತ್ತಿಗೆ.

೩

ಕಲ್ಲಾದ ದೇವರು ಮಣ್ಣಾದ ದೇವರು
ಬೂದ್ಯಾದ ದೇವರು ಹೋದಾರೋ
ಬಣ್ಣಾದ ದೇವರು ಸುಣ್ಣಾದ ದೇವರು
ಕಣ್ಣಾದ ದೇವರು ಬಂದಾರೋ
ವರ ಬೇಡೊ ವರ ಬೇಡೊ ಎಂದಾರೋ.

೪

''ರವಿ ಚಂದ್ರ ಮನಿ ದೀಪ। ನೆಲಕೆ ನೀರು ಸಮೀಪ
ಮನುಷ್ಯಾರ ಕುಲಮೂಲ ಒಂದಾಗಿ
ಸತ್ಯವಂತರಾಗಿ ನಿತ್ಯವಂತರಾಗಿ
ಬಾಳುವೆ ಮಾಡಲಿ ಚೆಂದಾಗಿ
ದೇವರ ಬೆಳಕಾಗಿ ಮುಂದಾಗಿ.''

---

ಭಾವ : ''ಎದೆಯ ಒಕ್ಕಲಿಗ'' ಎಂಬ ಹಾಡನ್ನು ಬರೆದುಕೊಂಡು ಅನೇಕ ದಶಕಗಳಾದವು. ಇಲ್ಲಿ ಮತ-ವಿದುಷ್ಟವಾಗದ ಉನ್ಮುಖ ಮಾನವತೆಯ ಶಿಖೋದ್ದೀಪನಕ್ಕೆ ಆಹ್ವಾನ ಮಾಡಲು ಕ್ಷೇತ್ರ ಸಿದ್ಧಿಯಾಗಬೇಕು. ಆ ಕರ್ಮ ಯೋಗದ ಕಾಯಕದಲ್ಲಿ ನಾವು ತೊಡಗೋಣ ಎಂಬ ಭಾವ ಸ್ಫೋಟವಾಗಿದೆ. ಇಕೋ ನೆಲ, ಆಕೋ ಜಲ (ಸಖೀಗೀತ) ಎಂಬ ಕವನದಲ್ಲಿ ಈ ಭಾವಾಂಕುರ ಮೂಡಿತ್ತು.

# ೩೯ ಅಹಂಕಾರದ ಬಿಡುಗಡೆಗಾಗಿ

ದಾಸ ಪುರಂದರ ವಿಟ್ಠಲನೊಡೆಯಾ
ಅಹಂಕಾರವಿದೆ ಕೊಡು ಬಿಡುಗಡೆಯಾ ॥ ಪಲ್ಲವಿ ॥

೧
ಪೊಳ್ಳಿನ ಹೊಟ್ಟೆಯ ಪುರಾಣಮೂರ್ತಿ
ಪುಟ್ಟದೆ ಪುಟ್ಟಿದೆ ಹೃದಯದಲಿ
ಊಟೆ, ಊಟೆಯೆನೆ ಪುಟಪುಟಿಯುತ್ತಿದೆ
ರವಿಕಿರಣದ ಪ್ರತಿ ಉದಯದಲಿ.

೨
ರಂಗು ರಂಗಿನಾ ಪಾಂಡುರಂಗದಲಿ
ಸೂತ್ರಧಾರನೆನೆ ಕುಣಿಯುತಿದೆ
ನರನಾರೀಗಣ ನಟನರ್ತನದಲಿ
ಎದೆ ಎದೆ ಎಳೆಯಲಿ ಹೆಣೆಯುತಿದೆ.

೩
ವಿಶ್ವಪ್ರವೇಶಿಸಿ, ಈಶ್ವರ ನೆನೆಯೆನೆ
ಇಟ್ಟಿಗೆ ನೆಲೆಯಲಿ ಲಯಿಸುತಿದೆ
ವಿಟ್ಠಲ, ವಿಟ್ಠಲ, ನಾಮರೂಪದಲಿ
ಪುಂಡರೀಕ ಓಲಯಿಸುತಿದೆ.

---

ಭಾವ : ಅಹಂಕಾರದ ಬಿಡುಗಡೆಗಾಗಿ ಪ್ರಾರ್ಥನೆ.

ವಿಶೇಷ : ಈ ಹಾಡು ಪುರಂದರದಾಸರ ಪುಣ್ಯ ತಿಥಿಯ ನಿಮಿತ್ತವಾಗಿ ಮೂಡಿ ಬಂದಿರುವುದಾದರೂ ಅನಾದಿ, ಅನಂತ ವಿಟ್ಠಲನ ಸ್ಮರಣೆ ಇದರಲ್ಲಿದೆ. ಇವನು ಕೃತ್ಸ್ನ ವಿಟ್ಠಲ. ಪ್ರೊ.ಬೇಂದ್ರೆ ಮಾಸ್ತರ ಅವರ ಎರಡು ಮರಾಠಿ ಉಪನ್ಯಾಸ ನಾಗಪೂರ ಆಕಾಶವಾಣಿಯಿಂದ ಬಿತ್ತರಿಸಲಾದವು. ವಿಟ್ಠಲ ಸಂಪ್ರದಾಯ ಎಂಬ ಪುಸ್ತಿಕೆ ಪ್ರಕಟವಾಗಿದೆ.

# ೪೦ ಸಂಭೂ-ಶಂಭೂ

೧

ನಮ್ಮ ದೇಶ ಭೂಪ್ರದೇಶ
ಸಾರ್ವಭೌಮ ಭಾವ
ಇದೋ ಜೀವ ಅದೋ ಆತ್ಮ
ಮರೆತವನೇ ಸಾವ.

೨

ಜಾಗರಕೋ ಕಣ್ಣೆ ಮರೆ
ಕಂಡ ಕನಸು ಸ್ಮರಣ
ನಿದ್ದೆ ಮಾಡುತಿರಲು ಬುದ್ಧಿ
ಅರೆಮರೆವಿಗೆ ಮರಣ.

೩

ಸ್ಮರಣದ ಕಣಕಣವು ರಣ
ನೆನೆವಿಗೆ ನನೆಕೊನೆಯೆ ಮೊನೆ.
ಮರನಿಗೆ ಸಾವಿರದೊ ಏನೋ ?
ಬೀಜ ಬೀಜ ಮೃಡನೆನೆ.

೪

ಮೃಡ ಮೃಡಾನಿ ನೃತ್ಯವಾಡೆ
ಭೂತಂಗಳದಲ್ಲಿ ಪಾಡೆ
ಓ ಅಭೂತ ! ಓ ಅಪೂರ್ವ
ಹಾಡು ಮೌನ ಮೂಡೆ

೫

ಭುಭುಃಕಾರ ಸಂಜೀವನ ಸಂಭೂ
ಶಂಭೂಽ
ಓಂಭೂಽ.

---

ಭಾವ : ಆದಿಮಧ್ಯಾಂತ ಏಕ, ಅದಿಮಧ್ಯಾಂತ ತ್ರಿಕ; ಆದಿಮಧ್ಯಾಂತ ಅತ್ರಿಕ- ಈ ಮೂವರ ಸಂಯಮಿತ ಪೂರ್ಣಶಂಭೂ ರೂಪ ವಿಟ್ಠಲ. ಇದು ಜ್ಞಾನದೇವ ಉಕ್ತಿಯ ಭಾವಾನುವಾದ-ಅನುಭವಾಮೃತ.
ಸಂಭೂತಿಯಿಂದಲೇ ಅಮೃತತ್ವ ಪ್ರಾಪ್ತವಾಗುತ್ತದೆ. ಇದು ಈಶಾವಾಸ್ಯೋಕ್ತಿ. ಈ ಎರಡರ ಸಂಧಿಯಲ್ಲಿ ಈ ಕವನದ ಭಾವಾಂಕುರವಿದೆ. ನಾಳಿನ ಮಾನವನ ಪ್ರಾಣದೇವನು ಒಡಮೂಡಲಿದ್ದಾನೆ.

ಶಬ್ದಾರ್ಥ : ಮೃಡ=ಮರಣ ಇಲ್ಲದ ಸಂಭೂ, ಶಂಭೂ ಶಿವ. ಮೃಡಾನಿ=ಶಕ್ತಿ ದುರ್ಗೆ, ಬುಭುಃಕಾರ=ಅಮರತ್ವಕ್ಕಾಗಿ ಹಾರೈಸುವ ಪ್ರಾರ್ಥನೆ.

# ೪೧ ಕಣ್ಣರಳು

೧

ಕಲ್ಲರಳಿ ಹೂವಾಗಿ। ಕೆಮ್ಮಣ್ಣ ಮನೆ ತೊಳಗಿ
ನಮ್ಮ ನಿಮ್ಮನ್ನ ಬರಮಾಡಿ। ಮನಮನ
ಕಮ್ಮಗಿರಿಸ್ಯಾವ, ಕಲ್ಲರಳಿ॥

೨

ಮಣ್ಣರಳಿ ಹೂವಾಗಿ। ನೂಲ ಬಟ್ಟೆಯಾಗಿ
ಮೈಮೈಗೆ ಧಾರದಾಧಾರಾ। ಗುಡಿ ಗುಡಿಗೆ
ಹೂಬತ್ತಿ, ಹೊತ್ತಿ, ಮಣ್ಣರಳಿ॥

೩

ನೀರರಳಿ ತಾವರಿ। ಮಿನ ಮಿನ ಮೀನಕ್ಕ
ಬೆಳಕುಂಡು ಬಾಳಿರೆನತಾವ। ಹಗಲಿರುಳು
ಬೆಳಕನುಣಸ್ಯಾವ ನೀರರಳಿ॥

೪

ದಿಕ್ಕರಳಿ ಬೆಳಗಾಗಿ। ನೆರಳರಳಿ ಇರುಳಾಗಿ
ನಿದ್ದಿ ಎಚ್ಚರಕು ತಿರುಳಾಗಿ। ಶ್ರೀಶೈಲಾ
ತಿರುಮಲೆಗೂ ಪಂಜು, ಬಾನರಳಿ॥

೫

ಗಾಳಿಗಾಳಿಗು ಮಥನ। ಆ ಗಾನ ಈ ತಾನ
ಮನವರಳಿ ಮರಳು ಆಗ್ಯಾವ। ತದ್ಧ್ಯಾನಾ
ಸದ್ಧ್ಯಾನ, ಮುಕ್ತಿ ಮನವರಳಿ॥

೬

ಜೀವರಳಿ ಜೀವಾಳ। ನಾವರಳಿ ನಮ್ಮ್ಯಾಳಾ
ನಾಚಿಕಿ ಅರಳಿ ನಗತಾವ। ತೊಟ್ಟಲಾ
ಕುಲಕ್ಯಾವ ಕೈಕೈ, ಜೀವರಳಿ॥

೭

ಬೀಸಿದರ ಕಾಳರಳಿ। ಕಾಸಿದರ ಅನ್ನರಳಿ
ನುರಿಸಿ ನುರಿಸಿದರ ಕವಳರಳಿ। ಎದಿಯರಳಿ
ಹಾಲು ತೊರೆದಾವ, ಮಗುವರಳಿ॥

೮

ಗರ್ಭಗುಡಿಯ ದೈವ। ದೀಪಕ್ಕ ಕಣ್ಣರಳಿ
ಹೊರಳಿ ನೋಡ್ಯಾವ ಒಳಗರಳಿ। ಕತ್ತಲೆಗು
ಹೌದೇನೋ, ಕಲ್ಲಿಗು ಕಣ್ಣು ಇರತಾವ॥

೯

ಶುದ್ಧ ಬ್ರಹ್ಮವು ಅರಳಿ। ಶಬಲಬ್ರಹ್ಮದ ಸರಣಿ
ಸರಿಗಮಪಧನಿ ಅಂದಾವ, ಧನಿಯರಳಿ
ಅಂತರಂಗವೆ ಅರಳ್ಯಾವ, ಅರುಳರಳಿ॥

---

ಭಾವ : ಕಲ್ಲಿನಲ್ಲಿಯೂ ಕಣ್ಣರಳುವುದನ್ನು ಕಾಣಬೇಕಾದರೆ ಮರಳಸಿದ್ದನ ಅರುಳು-ಜ್ಞಾನ-ಪಡೆದಿರಬೇಕಾಗುತ್ತದೆ. ಇದು ಬೀಸುಕಲ್ಲಿನ ತ್ರಿಪದಿ ಛಂದದ ಹಾಡು. ಅರಳುವ ಉತ್ಕ್ರಾಂತಿಯ ಉನ್ಮುಖಪಥದ ಹೆಜ್ಜೆಗುರುತು ಕಂಡು ಹಿಡಿಯುವ ಕಾಣ್ಕೆಯ ಸೂಚನೆ ಇಲ್ಲಿದೆ. ನವಮಾನವೀಯತೆ ಅರಳಲಿ ಎಂಬ ಅಭೀಪ್ಸೆ ಈ ಕವನದ ಪ್ರಮುಖ ಪ್ರೇರಣೆ.

ಶಬ್ದಾರ್ಥ : ಕಮ್ಮಗಿರಿಸು=ಸುಖವಾಗಿ ಇರುವಂತೆ ಮಾಡು. ಕುಲುಕು=ಅಲುಗಾಡಿಸು, ಕುಲಕಾಟ, ಒಯ್ಯಾರ. ಕವಳ=ತಂಬುಲ.



## ೪೨ ದೇವುವ್ವನ ಮೆರವಣಿಗೆ

ಸಂತೆಯ ಗದ್ದಲದಲ್ಲಿಯೆ ಸದ್ದಿಲ್ಲ
ದುಂದುಮ್ಮಿ ನಿನ್ನ ನಗಾರಿ ॥ ಪಲ್ಲವಿ ॥
ಭರತಿ-ಮಧ್ಯಾಹ್ನದ ಬಿಸಿಲಲ್ಲಿ ಮೆರೆವುದು
ಓ ತಾಯಿ ನಿನ್ನ ಸವಾರಿ ॥ ಅನು ಪಲ್ಲವಿ ॥

೧

ಮಾ, ಮಾ ಎನ್ನಲೆ? ಮಾಯೆಯೆ ನಿನ್ನ
ಹೂ ಹೂ ಹುಡಿ ಹುಡಿ ಪಡಿಮೆ
ಗಡಿದಾಟಿ ಬಂದೆವ್ವ ಮೈಮೈಯ ಹಿಡಿದೆ
ನಡಿಗೆಯ ಗತ್ತೆಲ್ಲ ನುಡಿಮೆ.

೨

ಪಡಿಬಿಂಬ ಡಾಳಿಂಬ ಕೌಸುಂಬಿ ಸೀರೆ
ನಗೆ ಸುರಿದ ಕಡೆಗೆಲ್ಲ ನೀರೇ
ಬೆವರಿದ ಮೈಮೆಗೆ ಬಾವನ್ನ ಗಂಧ
ಜಾತ್ರೆಯು ಊರಿಗೆ ಊರೇ.

೩

ಯಾವಚ್ಚಿನಲ್ಲಿ ಮುಚ್ಚಿದೆ ನನ್ನ
ಮೆಚ್ಚಿಗೆಗೆ ಬೇರೆ ಮದ್ದಿಲ್ಲ
ಉಸಿರಿನ ತಂತ್ರಿಯ ಮಂತ್ರಿಸಿದೆ ಮಾಯೆ
ಬಯಲಲಿ ಯಾರೂ ಕದ್ದಿಲ್ಲ.

೪

ಕೇಳುವ ಕಿವಿಯಲ್ಲಿ ಭಾವಿಯ ಆಳ
ಭವ ಭವ ಭಾವ ಅಪಾರಾ
ತೊರೆ ಹಾಲು ತುಂತುರುಹನಿ ಮಣಿಮಾಲೆ
ಎದೆತುಂಬಿ ಹಾರಾನೆ ಹಾರಾ.

೫

ತೊಯ್ದೆವೆಯಂಚಿಗೆ ಅಂಚಿಲ್ಲ ಸೆರಗಿಲ್ಲ
ಮಾನಸ ಸರಸಿ ಮರಾಳ
ಆಲಯ ಬಯಲೋ ಬಯಲೆ ಆಲಯವೊ
ಯಾಕೆ ನಿರಾಳ ಸುರಾಳ?

೬
ಚುಕ್ಕಿ ಕಸೂತಿಯ ಕರೆಯ ಪಟ್ಟಾವಳಿ
ಮುಗಿಲ ಬಣ್ಣದ ಸುತ್ತು ಲುಂಗಿ
ಮಾತಂಗ ಮಾತಂಗಿ ಮಾದಾಳ ಕೈಲಿಂಗಿ
ರೂಪು ತರಂಗ ವಿಭಂಗಿ.
೭
ಬಿಸಿಲಿನ ಕೊಡೆ ಹಿಡಿದೆ ನೆರಳಿಗಾಸರೆಯಿಡಿದೆ
ಹೆಜ್ಜೆಯ ಗುರುತಿಲ್ಲ ಹುಡಿಗೆ
ಓಹೋ ವಿಶ್ವಂಭರಿ ಓಹೋ ದಿಗಂಬರಿ
ಜನಮನ ನಿನ್ನುಡಿಗೆ ತೊಡಿಗೆ.
೮
ಹೊಲೆಯರ ಹಲಿಗೆಗ ಕುರುಬರ ಡೊಳ್ಳು
ಕೊರವರ ತುತ್ತು ಸನಾದಿ
ನಿರ್ಝರ ಝುಜ್ಝರ ಗೊಲ್ಲರ ಕೊಳಲುಲಿ
ವಾದಿಗೆ ವಾದಿ ಸಂವಾದಿ.
೯
ತುರುಕರು ಮುಂದೆ, ಕುರಿ ಮಂದೆ ಹಿಂದೆ
ಕುಕ್ಕೊ ಕೂಗಿತು ಕೋಳಿ
ಬೋಳಾದ ಮುಂಡೆ, ರತಿಯಾಗಿ ರಂಡೆ
ಧಗಧಗ ಕಿಚ್ಚಿನ ಹೋಳಿ.
೧೦
ದುರ್ಗದ ಅಕ್ಕನ ದೇಮವ್ವ ತಂಗಿ
ಮೈ ಮೈ ದೇಗುಲ ಮಾಡಿ
ಕೊರಳಿಗೆ ಜೋತಾಳು ಎದುಮುಗುಳು ಹೂತು
ಲಾಲಿಯ ಲಯದಲಿ ಹಾಡಿ.
೧೧
ಒಡನುಡಿಸವ್ವ ಸೋಬಾನೆ ಸುವ್ವಿ
ಆರಳಲಿ ಬಸಿರಲಿ ತತ್ತಿ
ಎಳ್ಳಷ್ಟು ಎಣ್ಣೆಗೆ ಸಾವಿರದ ಬತ್ತಿ
ಮೆರೆಯಲಿ ಆರತಿ ಎತ್ತಿ.

೧೨
ಸಾದು ಗಂಧಾಕ್ಷಂತಿ ಈಬತ್ತಿ ಕುಂಕುಮ
ಕಾಡಿಗಿ ಅರಿಷಿಣ ಮೆತ್ತಿ
ಹಸಿ ಹಣೆಯ ಗುಡಿಗೇ ನಡುಹುಬ್ಬ ಕುಡಿಗೆ
ಕಾದಾವು ಮಾದಾವು ನೆತ್ತಿ.
೧೩
ನಾಚಿಕೆ ನಯವೇಕೆ ಕಂಪನ ಭಯವೇಕೆ
ಪ್ರಳಯವೆ ಸೃಷ್ಟಿಯ ಹಾದಿ
ಮರುಳು ಕೂಸಂಭಟ್ಟ ಕಪ್ಪೆಗು ದನಿಗೊಟ್ಟ
ಇಂದಿನ ವೇದವನೋದಿ
೧೪
ನಂದಿ ಬಾಲವ ಹಿಡಿದು ಮಾರುತಿ ಕುಣಿದಾನು
ಕಂಟೆವ್ವ ಒಂಟೆವ್ವ ಬರ್ರಿ
ಮದ್ದಾನಿ ಸೊಂಡಿಗೆ ಹಾಕಿದೆ ಹೂಮಾಲಿ
ಕತ್ತೆತ್ತಿ ಅಲ್ಲಲ್ಲೆ ಇರ್ರಿ .
೧೫
ಜಾರಣ ಮಾರಣ ನಿಲ್ಲಿಸಿರಿನ್ನೂ
ಓರಣ ತೋರಣ ಬರಲಿ
ರಣರಣದಲ್ಲು ಕಣಕಣ ಹಲಿಗೆ
ಕೋಲಿಗೆ ತಾಳವು ಇರಲಿ.
೧೬
ಸೂರ್ಯನ ಒಲಿಹೊತ್ತಿ ಮನೆಮನೆ ಪಾಕ
ಓಂಕಾರ ಕಾಯಕದ ಗಿರಣಿ
ಮಂದಾಕಿನಿಯು ಇಳಿದು ಭಾಗೀರಥಿಯು ಹೊಳೆದು
ಕೂಡಿದಳು ನರಕ ವೈತರಣಿ.
೧೭
ಕುಡಿಯರ ತುಡಿಗೀಗ ದೇವಡಿಗನ ಕೋಲ
ಬಯಲಾಟ ಎಕ್ಕಲಗಾಣ
ಕಂಠದ ಉಲುಹಿರದ ಗುಣುಗುಣುಗಾನ
ಪ್ರತ್ಯಕ್ಷಕೇಕನುಮಾನ ?

೧೮

ಮರುಳು ಸಿವನ ಕೈಗೆ ಧತ್ತೂರಿ ಕೊಟ್ಟಾರು
ಹೊಗೆ ಹೊಗೆ ಧೂಪ ಲೋಭಾನ
ಕಾಮಾನ ಕ್ರೋಧಾನ ಡಂಭಾನ ಮೋಹಾನ
ಸುಟ್ಟಾರು ಎಲ್ಲಿತ್ತೊ ಧ್ಯಾನ ?

೧೯

ಸಿದ್ಧ ಲೋಕದ ಜಿನ ಇದ್ದಲ್ಲೆ ಹನುಮಾನ
ಬಿದ್ದಲ್ಲೆ ಕೇಳಿದ ಬುದ್ಧ
ಶಾಂತಿಗಾಗಿಯೆ ಯುದ್ಧ ಶಾಂತಿಗಾಗಿಯೆ ಯುದ್ಧ
ಕ್ರಾಂತಿಯೊ ಭ್ರಾಂತಿಯೊ ಶುದ್ಧ.

೨೦

ಅಗದವರಾರೋ ಮುಗದಯ್ಯ ನಿನ್ನ
ನಗದವರಾರೊ ಮಾದೇವ
ಜಗದವರರೋ ಸಿಗದವರಾರೋ
ಗುಪ್ತ ಭಕ್ತಿಗೆ ಸಪ್ತ ಭಾವ.

೨೧

ಆ ಜಾವ ಈ ಜಾವ ಮೂಜ್ಯಾವ ಇನ್ನೀಗ
ಪೂಜೆಯೊಳಗೆ ಪೂಜೆ ದಿವ್ಯ
ಡಿಮೋಕ್ರಸಿಯ ಸಿಂಹ ಆಸನ ಮಾಡಿದ್ದೆ
ದೇಮವ್ವ ಬಂದದ್ದೆ ನವ್ಯ.

೨೨

ಹಾಡಿದ್ದೆಲ್ಲಾ ಛಂದ ಮಾಡಿದ್ದೆ ಪ್ರಬಂಧ
ಕೂಡಿದ್ದೆ ಸಭೆ, ಅಟ್ಟಹಾಸ
ಬುದ್ಧ ಕಲ್ಕಿಯ ಕೂಡಿ ಕೃತಕೃತ್ಯರಾದರು
ಕೃತಯುಗಕ್ಕಾಯ್ತು ಸಂನ್ಯಾಸ.

೨೩

ಸತ್ತವರೆ ಸಾಯುವರು ಇರುವವರೆ ಬಾಳುವರು
ಗುಟ್ಟಿಲ್ಲ ರಟ್ಟಿಲ್ಲ, ಕುಟ್ಟು
ಧಿಕತಿಟ, ದಿಮಿದಿಮಿ, ಭೂತನೃತ್ಯದ ಸೀಮಿ
ಒಡ್ಡಕಿಲ್ಲ, ಪೊಳ್ಳು ಒಕ್ಕಟ್ಟು!

೨೪

ತಂತ್ರವಿದ್ದಂತೆಯೇ ಮಂತ್ರವು ಸಂಗಾತಿ
ಡಬಡ್ಡಾಳಿಕೆ ಏನು ಜಂತು ?
ಹೂವಿನೊಡನೆ ನಾರೊ ? ಯಾರೊಡೆನೆ ಯಾರ್‍ಯಾರೋ ?
ಅಂತಿಗೆ ಕೂಡಿತು ಅಂತೂ.

೨೫

ಆಚೆ ಈಚೆಗೆ ಸೇತು ಧಾತು ಮಾತಿಗೆ ಹೂತು
ಚರ್ಮಾನುರಕ್ತ ಸಗಂಧ
ಧರ್ಮಕರ್ಮವು ನಿನ್ನ ಕೈಯೊಳೆಗೇ ತಾಯೀ
ಮರ್ಮವು ಋಣಾನುಬಂಧ.

೨೬

ನಗಾರಿ ನೌಬತ್ತು ವಸುಧೆಯೇ ಸಂಪತ್ತು
ವ್ಯಕ್ತವಾಯಿತು ಜಾತಿಗತ್ತು
ಚರಮೂರ್ತಿ ಸ್ಥಿರಮೂರ್ತಿ ಭಾಗಾದಿಯಾಗದೆ
ಒಡಮೂಡಿ ಬರಲಿ ಜಗತ್ತು.

---

ಭಾವ : 'ದೇವುವ್ವನ ಮೆರವಣಿಗೆ' ಎಂಬ ಕವನಾವತಾರವನ್ನು 'ಬೇಂದ್ರೆ' ಲಿಪಿಬದ್ಧ ಮಾಡುವಾಗ 'ಪ್ರೊ.ಬೇಂ. ಮಾ' (ಪ್ರೊಫಸರ್ ಬೇಂದ್ರೆ ಮಾಸ್ತರ್) ಅನೇಕ ಸಲ ಸ್ತಂಭಿತರಾಗಿದ್ದುಂಟು. ಗ್ರಾಮದೇವತೆಗಳಲ್ಲಿ ದೇವುವ್ವ, ದುರ್ಗವ್ವ, ಕಟ್ಟಗೆಯ ಮೂರ್ತಿಗಳಾಗಿ ಪ್ರತಿಷ್ಟಿತರಾಗಿದ್ದನ್ನು ಅನೇಕರು ಕಂಡಿದ್ದುಂಟು. ತ್ವಷ್ಟಾರ ವಿಶ್ವಕರ್ಮದ ಸಂಸ್ಕೃತಿಯ ಪ್ರತಿಮೆ, ಪ್ರತೀಕಗಳು ಇವು. ಡೆಮಾಕ್ರಸಿ ಬಂದಾಗ ಲೋಕ ಹೃದಯದೊಳಗಿನ Demon-'ದೆವ್ವ' ದೇವ ರೂಪವಾಗಿ ಪರಿವರ್ತಿತವಾಗಬೇಕಾಗುತ್ತದೆ. ಆಗ ಮಹಾ ಸಂಕ್ರಾಂತಿಯ ಪರ್ವಕಾಲ ಸಂಭವಿಸುತ್ತದೆ.

ಇದು ದೇವಾಸುರ ಸಂಗ್ರಾಮದ ರೂಪಕ. ತ್ರಿಪುರ ಸಂಹಾರವಾಗಿ, ತ್ರಿಪುರ ಸುಂದರಿಯ ಪ್ರಾಸಾದಿಕ ಸಂತತಿ ಬರಬೇಕಾದರೆ ಗುರುವಿನ ಅರಿವಿನ ಮರವು ಆಗಬಾರದು. ಇಲ್ಲಿ ಗರತಿಯ ಹಾಡಿನ ಗತ್ತಿದೆ. ಕೋಲಾಟದ ಪದ್ಯವಾಗಬಹುದು. ಜಾಗತಿಕ ಸಾಮರಸ್ಯವಾಗಬೇಕಾದರೆ ಭಾರತೀಯ ಸಾಮರಸ್ಯವೂ ಅವಶ್ಯ. ಪಶುತ್ವದ ಲೋಪ ಹಾಗೂ ಮಾನವೀಯತೆಯ ಆವಿರ್ಭಾವವೂ ಆಗಬೇಕು.

ಶಬ್ದಾರ್ಥ : ಪಡಿಮೆ=ಪ್ರತಿಮೆ. ಕೌಸುಂಬಿ=ಕೇಸರಿ. ಬಾವನ್ನ=ಚಂದನ. ಮರಾಳ=ಹಂಸ. ನಿರಾಳ=ಆಕಾಶ. ಸುರಾಳ=ಆನಂದ. ವೈತರಣಿ=ನರಕಲೋಕದ ಒಂದು ನದಿ. ಡಂಭ=ಆಡಂಬರ. ಡಬಡ್ಡಾಳಿಕೆ=ತೋರಿಕೆ. ಚಾರಣ=ಸ್ತುತಿಗಾಯನ. ಮಾರಣ=ಕೊಲ್ಲುವಿಕೆ.

## ೪೩ ಕೇಳಿ ನುಡಿ; ನುಡಿಯ ಕೇಳಿ

೧

ಅಆ,  ಇಈ, ಉಊ ಎನ್ನೆ ಸ್ವರಜಾತಿಯ ಜತಿಜತಿ
ಘ್ರಾಣಮಾನ ಜ್ಞಾನತಾನ ಆತ್ಮನತನ ಕೃತಮತಿ
ಮೌನದಾಳೆ ಮಂದೇಹರ ಸಂದೇಹವು ಆ ಶ್ರುತಿ ॥ ನುಡಿಯ ಕೇಳಿ.

೨

ಏಳೆಗೀತಿ  ವೇಳೆಬಂತು ಮೇಳದಲ್ಲಿ ಸೇರಲೂ
ಏಳು ಎತ್ತು ಕುದುರೆ ಹತ್ತು ಸಮಯವಿಲ್ಲ ಮೀರಲೂ
ಮೂಡದಿಕ್ಕು ಉಕ್ಕು ಉಕ್ಕು ನೀಲಿ-ಕೆಂಪು-ನೇರಿಲೂ ॥ ನುಡಿಯ ಕೇಳಿ.

೩

ಯಾಲಕ್ಕಿಯ ಮುಖವಾಸದ ಸುಖವಾಸದ ಕಂಪನಾ
ಸಿಂಪುಹನಿಯ ಮುತ್ತಿನ ಗಣಿ ಜೇನು ಹನಿಯ ಘನಘನಾ
ಯಾ ಸಿಂಘನಿ ಸ್ಫುಟಿಸುವದೋ ಮುನ್ನೀರಿನ ಸುಸ್ವನ ॥ ನುಡಿಯ ಕೇಳಿ.

೪

ನಾಮ ಕಾಮಧೇನು ಈಗ ಸಾಮ-ಸೂಮ ಮೂರ್ತವು
ನೇಮಿಚಕ್ರ ಸದಾವಕ್ರ ಹೃದಯಾಶಾ ಪೂರ್ತವು
ತ್ವರಿತು ತೂರ್ತ, ತೂರ್ಯಧ್ವನಿ ಭಾವಭಾವ ಕೂರ್ತವು ॥ ನುಡಿಯ  ಕೇಳಿ.

೫

ಈ ನೇಸರು ಈ ನಿಸರ್ಗ ಯಜ್ಞ-ವೇದಿ ಪುಟ್ಟಿಸಿ
ತತ್ ಬ್ರಹ್ಮದ ಓಂ ವಿಸರ್ಗ ಸರ್ಗ ಸ್ವರ್ಗ ಹುಟ್ಟಿಸಿ
ಮೀಟು ಮೆಟ್ಟ ಮೇಟಿಯಾಗಿ ನಿಂತಿದೆ ನಿರಿ ನಿಟ್ಟಿಸಿ ॥ ನುಡಿಯ ಕೇಳಿ.

೬

ಅಶ್ವಿನಿ ತುಲೆ ಶ್ರಾವಣ ಬೆಲೆ ತೊಲೆ ತೂಕದ ಗುಂಜಿ
ಹಿಂಜಿದಂತೆ ಹಿಗ್ಗುತ್ತಿದೆ ಹತ್ತಿ ಬತ್ತಿ ಪಂಜಿ
ಮೌಂಜಿಬದ್ಧ ಬ್ರಹ್ಮಚಾರಿ ತೇಜಸ್ಸಿನ ಪುಂಜಿ ॥ ನುಡಿಯ ಕೇಳಿ.

೭
ಶಂಭು ಶಂಭು ಓಂ ಸ್ವಯಂಭು ಭವ ಭವ ಭವ ದಾಟಿಸು
ಋತಸತ್ಯದ ಆ ಮಹತ್ತು ಶ್ರದ್ಧೆಯಾಗಿ ನಾಟಿಸು
ಮಾಟಯೋಗ ನೀಟು ನೇರಕೂಟ ಕೋಟಿ ತ್ರಾಟಿಸು ॥ ನುಡಿಯ ಕೇಳಿ.
೮
ಕಂಠ್ಯನಾದದಾಽಕಾರ ಹಾರವಾಗಿ ಊರಿಸು
ಅನುಸ್ವಾರ ಏರಿ, ನಾಶಿ ಅವಿನಾಶಿಗೆ ಏರಿಸು.
ಶ್ರೀರಂಗದ ರಿಂಕಾರವ ಓಂಕಾರಕೆ ಸೇರಿಸು ॥ ನುಡಿಯ ಕೇಳಿ.
೯
ಸ್ವಸ್ತಿಮಂಗಲಂಽ ಭವತು ಸೌರಭಾಗ್ಯ ತೆರೆಯಲೀ
ಸೌಮ್ಯ ಸೋಮ ತಿಂಗತಿಂಗಳಾಗಿ ಮಾಗಿ ಮೆರೆಯಲೀ
ವಾದ್ಯವೃಂದ ಮಾಧ್ಯಮವೆನೆ ಸಂಗೀತವೆ ಹರಿಯಲೀ ॥ ನುಡಿಯ ಕೇಳಿ.
೧೦
ನರ್ತನವೋ ವರ್ತನವೆನೆ ಅಭಿನಯಿಸುತ ಸಾಗಲಿ
ಪ್ರೇಕ್ಷಕನಲಿ ಸಾಕ್ಷಿಕತೆಯು ಸಪ್ತಪಿಂಡವಾಗಲಿ
ನಿರ್ವಿಘ್ನಂ-ಚಾಂಗು-ಭಲಾ ಹೇಽರಂಬನು ತೇಗಲಿ ॥ ನುಡಿಯ ಕೇಳಿ.
೧೧
ಮೋದವೋ ಪ್ರಮೋದವೋ ಬೃಹದ್ವಿಭೂತಿ ಮೂಡಲಿ
ಪಡುವ ಹೊತ್ತು ಹೋತು, ಹೂತ ದೇವ-ಧ್ವನಿ ಹಾಡಲಿ
ಸಾರ್ವಭೌಮ ಮಾನವತೆಯ ಚಂದ್ರ ಸೂರ್ಯ ನೋಡಲಿ ॥ ನುಡಿಯ ಕೇಳಿ.
೧೨
ಪ್ರಾತಿಭನೆಲೆ ನವೋನವವು ಹತ್ತುಗ್ಗಡೆಯೆ ಅತ್ತಲೂ
ಅನಾದಿಯೋಗ ಸಾಂಖ್ಯಯೋಗ ಆನಂತ್ಯವೆ ಇತ್ತಲೂ
ಹಿಂದೆ ಮುಂದೆ ಮೇಲೆ ಕೆಳಗೆ ಒಳಗೆ ಹೊರಗೆ ಸುತ್ತಲೂ ॥ ನುಡಿಯ ಕೇಳಿ.

೧೩
ಎಲುವು ಎಲುವು ನಾದ ನಾದ ಯಾವುದು ಸಂವಿತ್ತಿಯೋ
ಮಾತೆಯೀವ ಎಣ್ಣೆ ಬೆಣ್ಣೆ ಉಣ್ಣುತ್ತಿದೆ ನೆತ್ತಿಯೋ
ನಿರ್ಲೇಪದ ರಸದ ಲಹರಿ ಆದಿತ್ಯಗೆ ಭಿತ್ತಿಯೋ ॥ ನುಡಿಯ ಕೇಳಿ.
೧೪
ಮೇರುದಂಡ ಅದು ಉದಂಡ! ತ್ಯಾಗಿಯಾಗಿ ಕೇಳುವೆ
ವರ್ಣ ವರ್ಣ ಆ ಸುವರ್ಣ ಬೆಳಕಿನಲ್ಲಿ ಬೇಳುವೆ
ಎಬ್ಬಿಸೆನ್ನ ತಬ್ಬಿಕೊಂಡು, ಏಳುವೆನೋ ಏಳುವೇ ॥ ನುಡಿಯ ಕೇಳಿ.

---

ಭಾವ : ಪರಾ, ಪಶ್ಯಂತಿ, ಮಧ್ಯಮಾ ಇವುಗಳ ಸಮ್ಯಕ್ ಯೋಗದಲ್ಲಿ ಕಾವ್ಯೋದ್ಭವವಾಗುತ್ತದೆ. ಈ ಶ್ರುತಿ ಸಂಪತ್ತಿಯನ್ನು ಸಾಮಾಜಿಕ, ರಾಜಕೀಯ ಕ್ಷಣಿಕ ಸಂಸ್ಕರಣಗಳಿಂದ ದುರ್ಬಂಧಕ್ಕೆ ಒಳಪಡಿಸಬಾರದು. ಅಂಥ ಎಚ್ಚರದ ಏಳು ಹೆಜ್ಜೆ ನಮಗೆ ಬೇಕಾಗಿವೆ. From Seven fold ignorance to Seven fold knowledge - ಅಜ್ಞಾನ ಸಪ್ತಕದಿಂದ ವಿಜ್ಞಾನ ಸಪ್ತಕದೆಡೆಗೆ ಎಚ್ಚತ್ತ ಮಾನವನು ಸಾಗಬೇಕಾಗುತ್ತದೆ. ಇಲ್ಲಿ ಶಬ್ದದ ಕ್ರೀಡೆ-ಕೇಳಿ ಇಲ್ಲ. ಸಮಾಹಿತ ಚಿತ್ತದಿಂದ ಅಕಾಮಹತರಾಗಿ ಕೇಳಬಹುದಾದ ಧ್ವನಿ ಇದೆ. 'ಅ' 'ಆ' ಗಳ ಪಾಠ ನಾವು ಪ್ರಾರಂಭಿಸಬೇಕು.

ಶಬ್ದಾರ್ಥ : ಸಿಂಫನಿ=symphony=ಸ್ವರ ಮೇಳ ಮೈತ್ರಿ-ಸಿಂಪು+ಹನಿ=ಸ್ವಾತಿ ನಕ್ಷತ್ರದ ನೀರಿನ ಹನಿ ಸಿಂಪಿನಲ್ಲಿ ಮುತ್ತಾಗುವ ಕ್ರಿಯೆ. ಮೇಟಿ-ಮೇಂಟಿ=ಶ್ರೇಷ್ಠತೆ, ದೊಡ್ಡಸ್ತಿಕೆ. ತ್ರಾಟಿಸು=ದೃಷ್ಟಿಬಂಧ. ಹೇರಂಬ=ಗಣಪತಿ. ಮೇರುದಂಡ=ಬೆನ್ನಹುರಿ. ಬೇಳುವೆ-ಬೇಳ್ವೆ= ಹೋಮ, ಯಜ್ಞ. ಮಂದೇಹರ=ರಾಕ್ಷಸ.

ವಿಶೇಷ : ನುಡಿ ೬-ಅಶ್ವಿನಿ ತುಲೆ, ಶ್ರಾವಣ ಬೆಲೆ ತೊಲೆ ತೂಕದ ಗುಂಜಿ-ಅಶ್ವಿನಿ ಮಾಸದಲ್ಲಿ ದಸರೆಯ ಹಬ್ಬ, ಆಡಂಬರದ ಹಬ್ಬ ಬರುತ್ತದೆ. ಅಶ್ವಿನಿ ಎಂಬುದು ತೂಕದ ಎರಡು ತಕ್ಕಡಿಗಳಂತೆ ಜೋಡಿ ನಕ್ಷತ್ರ. ಈ ಮಾಸದ ಮೌಲ್ಯ ಆಡಂಬರದಲ್ಲಿದೆ. ಶ್ರಾವಣ ಮಾಸದ ಬೆಲೆ-ವೇದ ಶ್ರವಣ ಮಾಡುವ ಆಡಂಬರ ರಹಿತ ಜ್ಞಾನೋಪಾಸನೆಯಲ್ಲಿದೆ. ಸುವರ್ಣದ ಒಂದು ತೊಲೆಯ ತೂಕ ಮಾಡುವಾಗ ಸುವರ್ಣಕಾರ ಒಂದೊಂದು ಗುಂಜಿಯಿಂದ ತೂಗಿ ಸರಿಪಡಿಸುತ್ತಾನೆ. ಮಾಸ ಮಹಾತ್ಮ್ಯದ ಮಹಿಮೆಯನ್ನು ಸೂಕ್ಷ್ಮವಾಗಿ ಅಭ್ಯಸಿಸಿ, ವಿಮರ್ಶಿಸಿ ತಿಳಿದುಕೊಳ್ಳುವುದು ಅವಶ್ಯ. ಇದು ಬ್ರಹ್ಮತ್ವಸ್ಥಿತಿ ಪಡೆದವನಿಗೆ ಸಾಧ್ಯ. ಈ ಉಕ್ತಿ ಪರಂಪರಾಗತ ಅಲಂಕಾರ ಉಕ್ತಿ ಅಲ್ಲ. ಇದು ವಿಶೇಷ ಜ್ಞಾನ ಸ್ಥಿತಿ.

# ೪೪ ಶಿಶುಮಾರನ ಲಾಲಿ

ಲಾಲೀ ಲಾಲೀ ಶಿಶುವೇ !
ಶಿಶು ಮಾರಾ !
ಅಶ್ವಾ-ಸಾಯುಜ್ಯಾ
ಜ್ಯಾವೇಧಾ-ವೇದಾ

ಪ್ರಳಯಾ ಜಳಧಿಯೊಳಿತ್ತೂ ಗೊಂಡಾರಣ್ಯಾ
ಕುರವಕದಂತೆ
ಧ್ಯಾನಾ ಮಾಡ್ಯಾನ್ ದಾಲ್ಭ್ಯ ಬಕನಂತೆ
ಹರಿಮತ್ಸ್ಯನ ಸಂತೆ.

ನಾಲ್ಕು, ಎಂಟು, ಹದಿನಾರು, ಮೂವತ್ತೆರಡೂ
ಬಹು ಮುಖದಾ ಬ್ರಹ್ಮರು ಕೃಷ್ಣಾರ್ಪಣವಾಗ್ಯಾರೋ
ಜಡಧಿಯ ಲಯದೊಳಗ
ಆವರ್ತಾ ಪುನರಾವರ್ತಾ
ವಡವಾ ಶಿಖಿ ಆಪೋನಾರಾಯಣನೊಳಗ
ಹರಿಹರರ ಬೆಳಗ
ಆರತಿ ಬೆಳಗ
೧
ಲಕ್ಷ್ಮೀ ಪಾರ್ವತೀ ಸರಸ್ವತೀಯೊಳಗ
ಮಾಹೇಶ್ವರಿ ಮುಖದೊಳಗಽ
ಓಂ ತತ್ ಸತ್ ಅದ್ ಇತಿಯೊಳಗಽ
ಗತಿಯೊಳಗಽ ಸ್ಥಿತಿಯೊಳಗಽ, ರಸರತಿಯೊಳಗಽ
ಚತ್ವಾರಿ-ಚಾರು-ಚರಿತ್ರೇ
ಪವಿತ್ರೇಽ-ಸೋಮಾನನೆ ಬಾರೇ
ಸಾವಿತ್ರೇಽ.
ಸತ್ಯಾ-ಸಾವಿತ್ರೀ ಕಂದಾ, ಗೋವಿಂದಾ
ಅರರೇ ಸಾವಿರದಾ ಕಡೆಯಿಂದಾ
ದಳದಳ ಕೂಡಿ ಮೂಡ್ಯದ ಅರವಿಂದಾ. ಆರತಿ ಬೆಳಗ

೨
ಅಗ್ನಿ-ಸೋಮಾಲಿಂಗನದೊಳಗಽ
ಚಾತುರ್ಯದ ಬಂಧಾ
ಪ್ರಪಂಚಾಽ ಛಂದಾ
ಷಣ್ಮುಖದಂದಽ
ಸಪ್ತಾಸಪ್ತೀ ಘನವೋ ಘನಮೇಧಾ
ಧರ್ಮಾಬೋಧಾಽ
ಮನದಿಂದಾ ಸುಪ್ರಽ ಮನಕಽ
ಉನ್ಮನಿ ಸೋಪಾನಾ
ಏರೀ ಇಳಿದೂ ಮಕ್ಕಳನಽ ಹರಸಿ
ಸುತ್ತೂ ಕರೆಸಿ
ಕೃಪೆಯಿಂದಾವರಸಿ
ಧ್ಯಾನಾಲೀನಾ ಮೀರಾ. ಆರತಿ ಬೆಳಗಽ
೩
ಜೋ ಜೋ ಎನ್ನಿರೋ ಬಾಲಗೋಪಾಲಕರೂ
ರಾಸಲೀಲೆಯ ಗೋಪಿಯರು.
ಗೋವರ್ಧನಧಾರಿ ಬಂದಾಽ
ವೃಂದಾವನದಿಂದಾ, ಜಾಲಂಧರ ಬಂಧಾಽ
ಮುಕ್ತಿ-ಭಕ್ತಿ-ಒಂದಾಽ
ದವೋಽ ನವೋಽ ನವೋಽ
ಮೀರಾ ಸುಮೇರೂ ಗಂಭೀರಾ
ಇಳಾ ವೃತಾಽ। ವಿಟ್ಠಲಾ ನಿಂದಾ
ಇತ್ತ ಕಾಮಾಽ ಅತ್ತಽ ಹಯಗ್ರೀವ ಧಾಮಾ
ಮತ್ಸ್ಯಾಕೂರ್ಮಾ ವರಾಹಾ ಉತ್ತರೋತ್ತರಕ
ದೇವತಾತ್ಮನ ಹೃದಯಾ
ಮಧು ಉದಯಾ. ಆರತಿ ಬೆಳಗಽ

೪

'ಇಮಾನೀ ಹಿಮಾನೀ' ಲಯಾ, ಮಲಯಾ
ಚಂದನಗಂಧಾ, ದೇವದ್ವಾರಾ
ನೃಸಿಂಹಾ-ರಾಮಾ-ಪರಶೂರಾಮಾ
ಜಿತ ಕಾಮಾಽ ರಾಮಾ ಬಲರಾಮಾ
ದೇವಕಿ ಕೃಷ್ಣಾಽ,
ವಸುದೇವನ ಕಂದಾ
ಬುದ್ಧಾ, ಮಹವೀರಾ ಬಂದಾ
ಹೃದ್ಬಂಧಾ.
ನರ-ನಾರಾಯಣ-ಕೀರ್ತಿ
ಭಗವಿದ್ಗೀತಾ ಮೂರ್ತಿ
ಬೆಳಗಿರಿ ಆರತಿಯಾ!

೫

ಯತಿವರ್ಯರು ಆಚಾರ್ಯರು
ಸಾಮಾಗಾನಾ.
ಸರ್ವಲೋಕೈಕ ಧ್ಯಾನಾಽ
ವಿಶ್ವೇದೇವತೆಗಳ ಸಭೆಯಲ್ಲಿ
ಮಂತ್ರಾಪುಷ್ಪಾ, 'ರಾಜಾಧಿರಾಜಾಯ
ರಾಧಾಕೃಷ್ಣಾಯ
ಮಧು ಮಾಧವಾಯ
ಶ್ರವಣಾಮಘಾಯ'.
ಮಂಗಲಮೂರ್ತೀ
ವಿಘ್ನೋಽ ವಿಶೇಷೋಭವತು
ಈಶ್ವರಾಽ ವಿಶೇಷಾಽ
ಅಶೇಷಾ-ಮಣಿಭೂಷಾ
ಪುರುಷೋತ್ತಮ ಅವತಾರಾ. ಆರತಿ ಬೆಳಗಽ

೬

ಮೀರಾ ಮೀರಾ ಮೀರಾಽ
ಇದು ಯಾವುದೊ ಗ್ರಾಮಾಽ
ರಾಮಾಽ ರಾಮಾಽ
ಹಯಗ್ರೀವಾ, ಹಯಾರೂಢಾ
ಹರಿಹರಿ ಹಯಮತ್ಸ್ಯ
ಹರಹರ ನರಹರಿ ಬಂದಾ
ಪ್ರಹ್ಲಾದನ ಪ್ರಭುವೋ
ಶರಭಾ-ಗಂಡಾ-ಭೇರುಂಡಾ
ಏಕೈಕ ಹೃದಯಾ
ಆಗಲಿ ಉದಯಾ..
ಓಂ ಸ್ವಸ್ತಿ! ಸ್ವಸ್ತೀ, ಸ್ವಸ್ತೀ
ಭೂಮಂಡಲ ಸ್ವಾಸ್ಥ್ಯ
ಲಕ್ಷಾ ಕಾರ್ತಿಕವಾಗಿ
ಕೋಟಿ ಕೋಟಿ ಅಬ್ಜಾ
ಆತ್ಮಿಕ ತೇಜಾ, ಕೃತುಬೀಜಾ
ಕೃತಕೃತ್ಯತೆ ಓಜಾ
ಝಾಽ ಝಾಽ, ದಧಿಕ್ರಾಽ
ದಧ್ಯಂಕನ ನೈಜಾ, ಸ್ವಸ್ತಿ. ಆರತಿ ಬೆಳಗಽ

---

ಭಾವ : ಶಿಶುಮಾರ ಅಥವಾ ಶಿಂಶುಮಾರನು ಪ್ರಳಯ ಜಲಧಿಗೆ ಸೃಷ್ಟಿರೂಪ ಕೊಡಬಲ್ಲ, ವಟಪತ್ರ ಶಾಯಿ ಶಿಶು ಹೌದು. ಇವನೇ ಬೌದ್ಧ ವಿಟ್ಠಲ, ಅವಧೂತ ದತ್ತ. ಚಿದಂಬರನ ಈ ಲಹರಿ ದೇವಜನ್ಮಕ್ಕೆ ಸ್ವಾಗತದ ಲಾಲಿ. ಓಂ. ಶಂ. ಈ ದೇವಜನ್ಮಕ್ಕಾಗಿ ಮಹಾತಪಸ್ಸು ಮಾಡಿದವರು ಪಾಂಡಿಚೆರಿಯ ಶ್ರೀಅರವಿಂದ ಹಾಗೂ ಶ್ರೀಮಾತೆಯವರು. ಈ ಕವನದ ವಾಚನ ಸಾಮಛಂದದ ರೀತಿಯಲ್ಲಿ ಮಾಡಬೇಕು.



''ನಾಕುತಂತಿ'' ಕೃತಿಗಾಗಿ ಭಾರತ ರಾಷ್ಟ್ರದ ಪ್ರತಿಷ್ಠಿತ ''ಜ್ಞಾನಪೀಠ'' ಸಾಹಿತ್ಯ ಪ್ರಶಸ್ತಿಯನ್ನು
ವರಕವಿ ದತ್ತಾತ್ರೇಯ ರಾಮಚಂದ್ರ ಬೇಂದ್ರೆ (ಅಂಬಿಕಾತನಯದತ್ತ) ಇವರಿಗೆ
ದಿ|| ೮-೧೧-೧೯೭೪ರಂದು ದಿಲ್ಲಿಯಲ್ಲಿ ಪ್ರದಾನ ಮಾಡಲಾಯಿತು.
(ಇದು ೧೯೬೭-೭೧ರ ಅವಧಿಯಲ್ಲಿ ಪ್ರಕಟಗೊಂಡ ಅತ್ಯುತ್ತಮ ಸಾಹಿತ್ಯ ಕೃತಿಗಾಗಿ
೧೯೭೩ರ ೯ನೇ ಜ್ಞಾನಪೀಠ ಪ್ರಶಸ್ತಿ - ಕನ್ನಡ ಸಾಹಿತ್ಯಕ್ಕೆ ದೊರೆತ ೨ನೇ ಪ್ರಶಸ್ತಿ)

## ಅನುಬಂಧ - I

ಭಾರತೀಯ ಜ್ಞಾನಪೀಠ ಪ್ರಶಸ್ತಿಯ ಪ್ರದಾನ ಕಾಲಕ್ಕೆ
ವರಕವಿ ಡಾ|| ದ. ರಾ. ಬೇಂದ್ರೆಯವರು ಮಾಡಿದ ಭಾಷಣ

## ಅನುಬಂಧ - II

**Dr. V. K. Gokak's General approach and Estimate of "Naku Tanti" by D. R. Bendre**

## ಭಾರತೀಯ ಜ್ಞಾನಪೀಠ ಪ್ರಶಸ್ತಿಯ ಪ್ರದಾನಕಾಲಕ್ಕೆ ವರಕವಿ ಡಾ|| ದ. ರಾ. ಬೇಂದ್ರೆ ಮಾಡಿದ ಭಾಷಣ

"Matter is a form of Spirit, a habitation of Spirit and here in matter itself there can be a realisation of Spirit.

**- Sri Aurobindo**

''ಜಡವೆಂಬುದು ಚೇತನದ ಒಂದು ರೂಪ, ಚೇತನದ ಆವಾಸಸ್ಥಾನ; ಇಲ್ಲಿ ಜಡದಲ್ಲಿಯೇ ಚೈತನ್ಯದ ಸಾಕ್ಷಾತ್ಕಾರ ಸಾಧ್ಯವಿದೆ.''

- ಶ್ರೀ ಅರವಿಂದರು

ಸನ್ಮಾನ್ಯ ಅಧ್ಯಕ್ಷರೆ, ಜ್ಞಾನಪೀಠ ಪ್ರಶಸ್ತಿ ಸಮಿತಿಯ ಸದಸ್ಯರೆ ಮತ್ತು ಗಣ್ಯ ಶ್ರೋತೃವೃಂದವೆ! ಒಂದಾನೊಂದು ಸತ್-ಕೃತಿಗೋ ಸದ್ಗುಣಕ್ಕೋ ಗೌರವದ ಮನ್ನಣೆ ದೊರೆತಾಗೆಲ್ಲಾ ಕೆಲವೊಂದು ಜನರು ಎದುರೆದ್ದು ಪ್ರತಿಭಟಿಸುತ್ತ ಆಪಾದಿಸುವುದುಂಟು; ಆಗ ಸಂಬಂಧಿಸದ ವ್ಯಕ್ತಿ ಆರೋಪಿಯೆನಿಸಿಕೊಂಡವನು, ಆತ್ಮವು ಅಮರವಿದೆಯೆಂದು ಉಲ್ಲೇಖಿಸುತ್ತಾ ಎದ್ದ ವಿವಾದವನ್ನು ಬಗೆಹರಿಸಬೇಕಾಗುತ್ತದೆ. ಅಂತಹದನ್ನೇನೂ ನಾನಿಂದು ಹೇಳಬಯಸುವುದಿಲ್ಲ; ಆದರೆ, ಒಳ್ಳೇ ಕಾವ್ಯವನ್ನು ಮೆಚ್ಚಿ ಸ್ವಾಗತಿಸುವ ಹೃದಯವೂ ಆತ್ಮವೂ ಇನ್ನೂ ಜೀವಂತವಿದೆ ಎಂಬ ಒಂದು ಮಾತನ್ನು ಮಾತ್ರ ಉಸರದೆ ಇರಲಾರೆ. ಪಂಪ, ಕುಮಾರವ್ಯಾಸ ಎಂಬೀ ಕವಿಗಳಿಗೆ ತವರು ಮನೆಯೆನಿಸಿದ ಧಾರವಾಡ ಸೀಮೆಯವನು ನಾನು. ಪ್ರಥಮ ಮೋಕ್ಷಗಾಮಿಯೆಂದು ಕರೆಯಲ್ಪಡುವ ಬಾಹುಬಲಿ ಗೊಮ್ಮಟನ ಭವ್ಯ ಶಿಲಾಮೂರ್ತಿಗಳನ್ನು ಯಾವ ನಾಡು ಅನೇಕ ಸಲ ಕಟೆದು ಪ್ರತಿಷ್ಠಾಪಿಸಿದೆಯೋ ಆ ನಾಡಿನವನು ನಾನು. ಭೂಗರ್ಭ ಶಾಸ್ತ್ರಜ್ಞರು ಈ ಭಾಗಕ್ಕೆ ಧಾರವಾಡ ಪ್ರದೇಶ Dharwad Region ಎಂದು ಕರೆದಿದ್ದಾರೆ. ಈ ಪ್ರದೇಶಕ್ಕೆ ಕನ್ನಡ ನಾಡು ಕರ್ನಾಟಕ ಎಂಬ ಹೆಸರಿದ್ದು ಅದನ್ನು ಆಂಡಯ್ಯನೆಂಬ ಕವಿ ತನ್ನ ಪೌರಾಣಿಕ ನೀತಿಕಥಾ ಕಾವ್ಯದಲ್ಲಿ ಬಹು ಸೊಗಸಾಗಿ ಬಣ್ಣಿಸಿದ್ದಾನೆ. ಆ ಕಾವ್ಯಕ್ಕೆ 'ಕಬ್ಬಿಗರ ಕಾವ-ಕವಿಗಳ ರಕ್ಷಕ' ಎಂಬ ಹೆಸರುಂಟು.

ಕಾಮ-ರತಿಯರ ವಿರಹ-ಮಿಲನಗಳನ್ನು ಆ ಕಾವ್ಯ ವಿವೇಚಿಸುತ್ತದೆ. ವಿರಹವೇ ನರಕ, ಮಿಲನವೇ ಸ್ವರ್ಗ ಎಂಬೀ ಮಾತಿನಲ್ಲಿಯ ಅರ್ಥವನ್ನು ಇನ್ನೂ ಪೂರ್ಣವಾಗಿ ಈ ಜಗತ್ತು ಅರಿತುಕೊಳ್ಳಬೇಕಾಗಿದೆ. ಇಲ್ಲಿ ಐಂದ್ರಜಾಲಿಕ ತರ್ಕವಾದ (Logic of Magic)ದ ಒಂದು ಸಮಸ್ಯೆಯುಂಟು. ಆದರೆ ಅದು ಸಂಗೀತದ ನಾದವನ್ನು (Music) ನಿರ್ಮಿಸಬಲ್ಲುದೇ? ಎಂಬುದೇ ನಿಜವಾದ ಪ್ರಶ್ನೆಯಾಗಿದೆ. ಇಂದಿನ ಪ್ರಶಸ್ತಿಯನ್ನು ಪಡೆದ 'ನಾಕು ತಂತಿ' ಎಂಬೀ ಗ್ರಂಥವು, ಪ್ರಕಟವಾದ ನನ್ನ ಕವನ-ಸಂಕಲನಗಳಲ್ಲಿ ೧೯ನೆಯದಾಗಿದೆ. (ಈ ಕವನ ಸಂಕಲನ ಪ್ರಕಟವಾದಂದಿನಿಂದ ಇತ್ತೀಚೆಗೆ ಮತ್ತೆ ಆರು ಕವನ-ಸಂಕಲನಗಳು ಪ್ರಕಟವಾಗಿವೆ; ಈ ಆರರಲ್ಲಿ ಎರಡು ಗ್ರಂಥಗಳು ಹಿಂದೆ ಪ್ರಕಟಿತವಾದ ಕೃತಿಗಳೊಳಗಿನಿಂದಲೇನೇ ಕೆಲಕೆಲವನ್ನು ಆಯ್ಕೆ ಮಾಡಿದ ಸಂಗ್ರಹ ಗ್ರಂಥಗಳಾಗಿವೆ.)-ನನ್ನ ಈ ೧೯ನೇ ಕವನ-ಸಂಕಲನವೇ ದೈವವಶಾತ್ ಅಥವಾ ವಿಧಿಲಿಖಿತವೋ ಎಂಬಂತೆ ಪ್ರಶಸ್ತಿ ಸಮಿತಿಯ ನಿರ್ಣಯದ ಮೂಲಕ ೧೯೭೩ನೇ ವರುಷಕ್ಕೆ ಸಲ್ಲುವ ಬಹುಮಾನದ ಭಾಗ್ಯವನ್ನು ಪಡೆದಿದೆ. ಮತ್ತು ಉತ್ಕಲಪ್ರಾಂತದ ಲೇಖಕ ಬಂಧುವಿನ ಜೊತೆಯಲ್ಲಿ ಈ ಭಾಗ್ಯವನ್ನು ಪಾಲುಗೊಳ್ಳುವ ಸಂತಸವು ನನ್ನದಾಗಿದೆ. ಇದೇನೂ ಹೊಸ ಸಂಗತಿಯಲ್ಲ. ಈ ಮೊದಲು ಐದು ವರ್ಷಗಳ ಹಿಂದೆ ಕರ್ನಾಟಕದವರೇ ಆದ ಡಾ. ಕೆ. ವ್ಹಿ. ಪುಟ್ಟಪ್ಪನವರು ಗುಜರಾಥದ ಶ್ರೀ ಉಮಾಶಂಕರ ಜೋಶಿಯವರ ಜೊತೆಯಲ್ಲಿ ಅಂದಿನ ಪ್ರಶಸ್ತಿಪ್ರಾಪ್ತಿಯ ಗೌರವದಲ್ಲಿ ಪಾಲುಗೊಂಡದ್ದುಂಟು. ಈ ಗೌರವವನ್ನು ಪಡೆದ ಭಾರತ ಭಾರತೀಯ ಮೊದಲ ಹತ್ತು ಮಕ್ಕಳಲ್ಲಿ ನಾನು ಒಬ್ಬನಾಗಿದ್ದೇನು. ಮನೆ-ಮಾತು ಅಲ್ಲದ ಒಂದು ಭಾಷೆಯಲ್ಲಿ ಬರೆದು ಈ ಗೌರವ ಪಡೆದವರಲ್ಲಿ ನಾನೇ ಮೊದಲಿಗನೆಂದು ಕಾಣುತ್ತದೆ. ನನ್ನ ಮನೆ-ಮಾತು ಮರಾಠಿ ಇದ್ದರೂ ಉದಾರ ಹೃದಯದ ಕನ್ನಡ ಜನತೆಗೆ ಈ ಪ್ರಸಂಗದಲ್ಲಿ ನನಗಿಂತಲೂ ಹೆಚ್ಚಿನ ಹರುಷವುಂಟಾಗಿದೆ. ಅಂತೆಯೆ, ನನ್ನ ಹರುಷವೂ ಇಮ್ಮಡಿ-ಮುಮ್ಮಡಿಗೊಂಡಿದೆ; ಈಗ ದಿಲ್ಲಿಯಲ್ಲಿ ನಡೆದ ಈ ಸಮಾರಂಭದಲ್ಲಿ ಆ ಹರುಷ ನಾಲ್ಮಡಿಗೊಂಡಿದೆ. ೪೪ ಕವನಗಳನ್ನುಳ್ಳ ಈ 'ನಾಕು ತಂತಿ' ಎಂಬ ಕೃತಿ ಮೂಲಭೂತವಾಗಿ ನಾಲ್ಕು ಎಂಬ ಸಂಖ್ಯೆಗೆ ಸಂಬಂಧವುಳ್ಳದ್ದಾಗಿದೆ. ಪಂಪನಿಗಿಂತಲೂ ಪೂರ್ವದಲ್ಲಿಯೆ ಕನ್ನಡ ನಾಡು 'ಅನಂತ ಚತುಷ್ಟಯ'ದ ದರ್ಶನದಲ್ಲಿ ಸಂತೋಷವನ್ನು ಪಡೆದಿದೆ. ಇದುವೇ 'ಸಿದ್ಧ ಪದವಿ'. ನಮ್ಮ ನಾಡಿನಲ್ಲಿ ಶಿಕ್ಷಣದ ಸಂಸ್ಕಾರವು 'ಓಂ ನಮಃ ಸಿದ್ಧಂ' ಮತ್ತು 'ಶ್ರೀ ಗಣೇಶಾಯ ನಮಃ' ಎಂಬ ಪದಪುಂಜಗಳಿಂದಲೇ ಆರಂಭವಾಗುತ್ತದೆ. ಕನ್ನಡದ ಚಂಪೂ ಮಹಾಕಾವ್ಯಗಳಲ್ಲಿ ಪಂಚ ನಮಸ್ಕಾರವು ಕ್ರಮಬದ್ಧ ನಿತ್ಯ ಲಕ್ಷಣವಾಗಿದೆ. ಪ್ರತಿ ೨೪ ಗಂಟೆಗಳಲ್ಲಿ ಒಂದು ಸಲ ಕಾಣಿಸಿಕೊಳ್ಳುವುದಿಷ್ಟೇ ಪ್ರಭಾತವಲ್ಲ. ಯಾವಾಗ ಪ್ರೇಮದ ಕಮಲವು ಶಾಂತಿಯ ಚೌರಸ ರೂಪದಲ್ಲಿ ಅರಳಿ ಹೂವಾಗುವುದೋ ಆಗ ನಮ್ಮ ಜೀವನದಲ್ಲಿ ಗಂಭೀರತೆಯುಂಟಾಗಿ ಪ್ರಕಾಶವೊಂದು ಬೆಳಗುವುದು. ಅದುವೇ ನವ ಸೃಷ್ಟಿ; ಅದು ಕೇವಲ ಯಥಾಪೂರ್ವವಾದ ಪುನರ್ಜಾತ ಸೃಷ್ಟಿಯಲ್ಲ. ಆದರೆ ಅದು ಯಥಾ-ಅಪೂರ್ವ ಸೃಷ್ಟಿ - 'ನಾಕು ತಂತಿ' ಎಂಬೀ ಕೃತಿಯಲ್ಲಿ ಬರುವ 'ಶಿಶುಮಾರನ ಲಾಲಿ' ಎಂಬ ಹಾಡು ಭಗವತೀ ಶ್ರೀಮಾತೆಯ ದಿವ್ಯ ಕೃಪೆಯ ಆಗಮನವನ್ನು ಘೋಷಿಸುತ್ತ ಈ ನವಪ್ರಭಾತದ ಜನ್ಮೋತ್ಸವವನ್ನು ನೆರವೇರಿಸುತ್ತದೆ. ಸಮಸ್ತ ಸೃಷ್ಟಿ ಪ್ರೇಮದ ಪ್ರಸೂತಿಯಾಗಿದೆ; ಅಲ್ಲಿ ಪ್ರೇಮವೇ ಇರದಿದ್ದರೆ ಅದೊಂದು ಶೂನ್ಯವನ್ನೇ ಹೊರತರುವ ಕೇವಲ ಶ್ರಮವೇ ಸರಿ. 'ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ.' 'ನು' ಎಂಬುದು ಒಂದು ತಪ, ಒಂದು ನೋವು; ತಾಪವೇ ತಪವಾಗುವುದು. ಏಕೆಂದರೆ ಆತ್ಮವು ತನ್ನನ್ನೇ ತನಗೆ ಅರ್ಪಿಸಿಕೊಂಡ ಸ್ವ-ಅರ್ಪಣೆ ಅದಾಗಿದೆ. 'ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ

ಮಂತವ್ಯೊ ನಿದಿಧ್ಯಾಸಿತವ್ಯಃ.' ಆತ್ಮವನ್ನೇ ನೋಡಬೇಕು, ಕೇಳಬೇಕು, ಬಗೆಯಬೇಕು, ನೆನಿಸಬೇಕು. ವೃಷ್+ನು ಅಥವಾ ವಿಷ್ಣು ಎಂಬ ಈ ಆತ್ಮಯಜ್ಞವು ತ್ರಿಕೋಣತ್ವದ ಪ್ರಾಣಸತ್ತ್ವವೇ ಆಗಿದ್ದು, ಅನಂತವೇ ಆಗಿರುವ ವರ್ತುಲತ್ವದ ಮುಖಾಂತರ ಚೌಕೋನಕ್ಕೆ ಸಂಬಂಧವುಳ್ಳದ್ದಾಗಿದೆ. 'ನು' ಎಂಬುದು ನಾ, ನೀ, ಆ, ತಾ ಎಂಬವುಗಳನ್ನು ಮಂತ್ರ ರೂಪದಲ್ಲಿ ಇಡಿಯಾಗಿ ಸಮರಸಗೊಳಿಸುವ ಸೃಜನಾತ್ಮಕ ಪ್ರೇಮದ ಸಾಂಕೇತಿಕ ಬೀಜಾಕ್ಷರವಾಗಿದೆ. ನಾನು, ನೀನು, ಆನು, ತಾನು ನಾಕೆ ನಾಕು ತಂತಿ!

೩$^{೨}$+೪$^{೨}$=೬$^{೨}$-೫$^{೨}$=೯೧ ತಿಳಿವಳಿಕೆಯ ಅಥವಾ ವಿಜ್ಞಾನದ ಮನ್ವಂತರವು ನಮ್ಮೆಡೆಗೆ ಧಾವಿಸಿ ಬರುತ್ತಲಿದೆ; ಸ್ವಾಗತಕ್ಕಾಗಿ ನಾವೂ ಒಂದು ಸಿದ್ಧತೆಯನ್ನು ಮಾಡಬೇಕು. ಅದೆಂತೆಂದರೆ, ಒಂದು ಶತಮಾನದವರೆಗೆ ನಾವು ಶಾಂತಿಯನ್ನು ಹಿಡಿದಿಟ್ಟುಕೊಂಡು ಪ್ರೇಮ-ಪ್ರಕಾಶಗಳನ್ನು ಅನುಭವಿಸುತ್ತ ಆ ಅನುಭವವನ್ನು ಮತ್ತೆರಡು ಶತಮಾನಗಳವರೆಗೂ ಬೆಳಸಿ ಮುಂದುವರಿಸಬೇಕು. ಶ್ರೀ ಅರವಿಂದರ ಜನ್ಮಸಂವತ್ಸರ ೧೮೭೨ರಿಂದ ೨೨೭೨ರ ವರೆಗಿನ ಈ ನಾಲ್ಕುನೂರು ವರುಷಗಳ ಅವಧಿಯು ''ನವೀನ ಕೃತಯುಗ''ವಾಗಿದೆ. ೧೯೭೨ ರಿಂದ ೨೦೭೨ ಈ ಕಾಲಾವಧಿ ಅದರ ದ್ವಿತೀಯ ವಿಕಸನಾವಸ್ಥೆಯಾಗಿದ್ದು ಅದೀಗ ತನ್ನ ಪ್ರಭಾವವನ್ನು ಬೀರುತ್ತ ಕಾರ್ಯಶೀಲವಾಗಿದೆ. ೧೯೭೩ ರಲ್ಲಿ ನನಗೆ ಜ್ಞಾನಪೀಠ ಪ್ರಶಸ್ತಿ ದೊರೆತ ಈ ಘಟನೆ ನನ್ನ ಮಟ್ಟಿಗಂತೂ ಸುತರಾಂ ಕಾಕತಾಲೀಯ ಘಟನೆಯಲ್ಲ, ಅಥವಾ ಆಕಸ್ಮಿಕವಾಗಿ ಸರಿಹೊಂದಿದಂಥ ಸಹಘಟನೆಯೂ ಅಲ್ಲ. ಸೃಷ್ಟಿಯೆಂಬ ಐಂದ್ರಜಾಲಿಕ ಮಾಯೆಯೊಡನೆ ಸಮರಸಗೊಳ್ಳುವ ಅನಂತ ಬ್ರಹ್ಮತತ್ತ್ವದ ತರ್ಕದ ರೀತಿ ಇದು. ನನ್ನ ಹೇಳಿಕೆಯನ್ನು ಒಂದು ಕ್ಷಣಕಾಲ ಅಸ್ಥೆವಹಿಸಿ ಕೇಳಬೇಕೆಂದು ಪ್ರಾರ್ಥಿಸುವೆ. ದಯವಿಟ್ಟು ಚಿತ್ತಗೊಟ್ಟು ಕೇಳಿರಿ. ಕನ್ನಡ ನಾಡು ಯಾವಾಗಲೂ ಭಗವದ್ಗೀತೆಯ ಈ ಸೂಕ್ತಿಯನ್ನು ಪ್ರಮಾಣ ವಾಕ್ಯವೆಂದು ಸ್ವೀಕರಿಸಿದೆ; 'ಸಾಂಖ್ಯ ಯೋಗೌ ಪೃಥಕ್ ಬಾಲಾಃ ಪ್ರವದಂತಿ ನ ಪಂಡಿತಾಃ'. ಜೈನ, ವೀರಶೈವ ಅಥವಾ-ವೈದಿಕ ಎಂಬ ಯಾವುದೇ ಪರಂಪರೆಯಲ್ಲಿ ಬೆಳೆದು ಬಂದಿರುವ ಕನ್ನಡ ಕಾವ್ಯವು ಸಂಖ್ಯಾಶಾಸ್ತ್ರದ ಆಧಾರದ ಮೇಲೆ ಸ್ಥಿರವಾಗಿ ನೆಲೆನಿಂತಿದೆ. ಸಂಖ್ಯೆಗಳು ನನ್ನೊಡನೆ ಮಾತನಾಡುತ್ತಿರುವದರಿಂದ ನಾನೂ ಸಂಖ್ಯೆಗಳಲ್ಲಿಯೇ ತೊದಲು ನುಡಿಯುತ್ತಿರುವೆ. 'ನಾಕು ತಂತಿ' ಎಂಬ ಕೃತಿ ಸಂಖ್ಯೆಗಳನ್ನು ಕುರಿತು ವಿವೇಚಿಸಿಲ್ಲ; ಆದರೆ ಅದು ಜೀವನದಲ್ಲಿ ಧ್ವನಿತವಾಗಿರುವ ಸಾಮಂಜಸ್ಯಕ್ಕೂ ಸಾಮರಸ್ಯಕ್ಕೂ ಅಭಿವ್ಯಕ್ತಿಯನ್ನು ಕೊಡುತ್ತಿದೆ. ಈ ಸಮರಸ ಸೂತ್ರವೇ ಪ್ರಾಣಕ್ಕೂ ಪ್ರೇಮಕ್ಕೂ ನವೋ ನವ ಪರಿಪೂರ್ಣತೆಗಳನ್ನು ಒದಗಿಸುತ್ತ ಅವುಗಳಿಗೆ ವಿಶಾಲತೆಯನ್ನು ತಂದುಕೊಡುತ್ತದೆ.

'ಇತಿಹಾಸ ಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್' ಎಂಬುದಾಗಿ ಬಹುಕಾಲದ ಹಿಂದೆಯೇ ಋಷಿಗಳು ಸಾರಿದ್ದಾರೆ. ವೇದವು ಕಾವ್ಯವಾಗಿದೆ. ವಾಗಾರ್ಥ ಸಂಪೃಕ್ತಿಯೂ ಸಾಂಖ್ಯಯೋಗ ಸಂಪೃಕ್ತಿಯೂ ಸಮಾಂತರವಾಗಿ ಸಾಗಿದ್ದು ಅನಂತದಲ್ಲಿ ಅವು ಸಂಧಿಸುತ್ತವೆ. ಸಾಂತವು ಸಮಾಂತರತೆಯನ್ನು ಬಲ್ಲದು. ಅನಂತವು ಅದರಿಂದ ಅಬಾಧಿತವಾಗಿದೆ. ಖಂಡಿತವಾಗಿಯೂ ನಾನು ಕನ್ನಡದಲ್ಲಿ ಬರೆಯುತ್ತೇನೆ. ನನ್ನ ಮಾತೃಭಾಷೆಯೇನೋ ಮರಾಠಿಯೆಂಬುದು ನಿಜವೇ ಸರಿ. ಈ ಉಭಯ ಭಾಷೆಗಳಿಗೆ ಸಂಸ್ಕೃತವೇನೂ ಶತ್ರುವಲ್ಲ; ಇಂಗ್ಲೀಷ್ ಭಾಷೆಯಾದರೂ ಅಪವಾದವಾಗಬೇಕೇ? ಇಂಗ್ಲೀಷ್ ಭಾಷೆಯ ಲಿಪಿಯಲ್ಲಿ ೨೬ ಅಕ್ಷರಗಳು ಮಾತ್ರ ಇದ್ದರೆ, ಸಂಸ್ಕೃತದ ಲಿಪಿಯಲ್ಲಿ ೬೪ ವರ್ಣಗಳುಂಟು. ವರ್ಣವ್ಯವಸ್ಥೆ ವಿಶ್ವಂಭರವಾಗಿದೆ. ನಾವು ೪$^{೨}$ ದಿಂದ ೪$^{೪}$ರ ಕಡೆಗೆ ಮುನ್ನಡೆದಿದ್ದೇವೆ. ೪$^{೪}$ ಎಂಬುದು ೫$^{೪}$ನ್ನು

ಸಂಧಿಸಿದಾಗ ಅಭೂತಪೂರ್ವವಾದ ಸಂಗತಿಯೊಂದು ಹೊರಹೋಮ್ಮಿ ಬರುತ್ತದೆ. ಈ ಹೊರಹೊಮ್ಮುವಿಕೆಯು ಧ್ಯಾನಿಬುದ್ಧರಿಂದ ಧ್ವನಿತವಾಗಿದೆ. ಅಲ್ಲಿ ೪ನೇ ಬೆರಳು ೫ನೆಯದನ್ನು ಸ್ಪರ್ಶಿಸುತ್ತದೆ.

ಪಾಂಕ್ತಂ ಸರ್ವಂ ನಾಲ್ಕನ್ನು ಬಿಚ್ಚಿ ಐದನ್ನು ತೋರಿಸಬೇಕೆಂಬುದು ಯುಗಯುಗಗಳ ಇಚ್ಛೆಯಾಗಿದೆ. ಇದುವೇ ಋಗ್ವೇದ (ಮಂಡಲ ೧೦, ಸೂಕ್ತ ೧೯೧)ದ ನಾಲ್ಕನೇ ಸೂಕ್ತದಲ್ಲಿಯ ದ್ರವ್ಯವಿಶೇಷವಾಗಿದೆ. ನಾನೇನೂ ಸಂಖ್ಯೆಗಳೊಡನೆ ವಿನೋದ ನಡೆಸಿಲ್ಲ. ಆದರೆ ವಿಜ್ಞಾನವು ಸಂಜ್ಞಾನದೊಡನೆ ಸಂಪರ್ಕ ಪಡೆದಾಗ ಮತ್ತು ಅಭಿಜ್ಞಾನವು ಪ್ರತ್ಯಭಿಜ್ಞಾನವನ್ನು ಸಂಧಿಸಿದಾಗ ಮಹತ್ತರವಾದೊಂದು ಸಿದ್ಧಿಯು ಪ್ರಾಪ್ತವಾಗುತ್ತದೆ. ಇದುವೇ ಶುಲ್ಬಸೂತ್ರದಲ್ಲಿ ಉಕ್ತವಾದ ಸವಿಶೇಷಜ್ಞಾನವು. ಈ ಜ್ಞಾನವೇ ಸನಾತನ ಯಜ್ಞಪುರುಷನಿಗಾಗಿ ಸಂಬಂಧಿಸಿದ ಚೌಕೋನ, ವರ್ತುಲ, ಅರ್ಧವರ್ತುಲ ಮತ್ತು ತ್ರಿಕೋಣಾಕೃತಿಗಳನ್ನು ವಿವೇಚಿಸುತ್ತದೆ. ಈ ದಿನವು ಒಂದು ಅಪರೂಪದ ಪ್ರಸಂಗವಾಗಿದ್ದು ಯಜ್ಞ, ದಾನ, ತಪ, ಕಾಲಗಳು ಇಲ್ಲಿ ಸಂಮಿಲಿತವಾಗಿವೆ; ಲಕ್ಷ್ಮೀದೇವಿಯು ಸರಸ್ವತೀದೇವಿಯನ್ನು ಒಂದಾನೊಂದು ಗಣ್ಯ ಸಿದ್ಧಿಗಾಗಿ ಸ್ವಾಗತಿಸುತ್ತಲಿದ್ದಾಳೆ. ಇಷ್ಟೊಂದು ಪ್ರೇಕ್ಷಕವೃಂದವು ನಿರ್ಮತ್ಸರ ಭಾವದಿಂದ ಬಂದು, ಇಲ್ಲಿ ಸತ್ಕರಿಸಲ್ಪಡುವ ಪ್ರತಿಭೆಯನ್ನು ಸಂಭ್ರಮದ ಸಂತೋಷದಿಂದ ನೋಡಿ ನಲಿಯಲು ನೆರೆದಿರುವುದೂ ಒಂದ ಹೆಚ್ಚು ಅಪರೂಪದ ಪ್ರಸಂಗವೇ ಸರಿ. ನನಗೀಗ ಮೊನ್ನೆ ಜನೇವರಿ ೧೯೭೪ಕ್ಕೆ ೭೮ ತುಂಬಿತು; ನನ್ನ ಸಾರ್ವಜನಿಕ ಜೀವನದ ೬೦ಕ್ಕಿಂತ ಹೆಚ್ಚು ವರ್ಷಗಳ ಅವಧಿಯಲ್ಲಿ ಈ ಕವಿಗೆ ದೊರೆತ ಅನೇಕ ಸನ್ಮಾನಗಳನ್ನು ಅತ್ಯಂತ ಸಮಾಧಾನ ಚಿತ್ತದಿಂದ ಸ್ವೀಕರಿಸುವ ಅಭ್ಯಾಸವು ನನಗುಂಟು. ನನ್ನ ಆಯುಷ್ಯದ ೫೦ನೇ, ೬೦ನೇ, ೭೦ನೇ ಮತ್ತು ೭೫ನೇ ವರುಷಗಳಲ್ಲಿ ನನ್ನ ದೇಶಬಾಂಧವರು ಧಾರವಾಡ-ಸೊಲ್ಲಾಪೂರ-ಶಿರಹಟ್ಟಿ-ಉಡುಪಿಗಳಲ್ಲಿ ನನ್ನನ್ನು ಸಾರ್ವಜನಿಕವಾಗಿ ಸನ್ಮಾನಿಸುತ್ತ ಬಂದಿದ್ದಾರೆ. ನನ್ನ ಪದ್ಮಶ್ರೀ ಪದಕವೂ ಪ್ರಶಸ್ತಿಯೂ ನನಗೆ ಅಂಚೇ ಅಧಿಕಾರಿಗಳ ಮುಖಾಂತರ ಸಂದಿದೆ. ದಿಲ್ಲಿಯ ಸಾಹಿತ್ಯ ಅಕಾಡೆಮಿಯ ಸಂಚಾಲಕರು ನನ್ನ ಜನ್ಮಸ್ಥಳವೂ ಕರ್ಮಸ್ಥಳವೂ ಆದ ಧಾರವಾಡದಲ್ಲಿಯೇ ಬಹು ಕರುಣೆಯಿಂದ ನನಗೆ ಸನ್ಮಾನ ನೀಡಿದ್ದಾರೆ. ಕನ್ನಡವನ್ನು ಬಲ್ಲ ಸಾರ್ವಜನಿಕರ ಮಧ್ಯದಲ್ಲಿ ಆ ಗೌರವ ಬಂದಾಗ ನನಗೆ ಸಹಜವಾಗಿಯೇ ತವರಿನ ತೃಪ್ತಿಯೆನಿಸಿತು. ಅಂದು ನನಗೆ ಕೊಡಲ್ಪಟ್ಟ Fellowhsip ಎಂಬ ಪದವಿ ನನಗೆ ಮಾಸಿಕ ವೇತನವನ್ನು ಒದಗಿಸಿರಬೇಕೆಂದು ನನ್ನ ಕೆಲ ಮಿತ್ರರು ತಪ್ಪಾಗಿ ತಿಳಿದುಕೊಂಡರು. ಆದರೆ ಇಂದು ದೊರೆತ ಜ್ಞಾನಪೀಠ ಪ್ರಶಸ್ತಿ ಹಣದ ಪೇಟೆಯಲ್ಲಿಯೂ ಭಾರವಾದ ತೂಕವುಳ್ಳ-ಬೆಲೆಯುಳ್ಳ ಗೌರವವನ್ನು ನನಗೆ ಒದಗಿಸುತ್ತಾ ಇದೆ. ಅದಕ್ಕಾಗಿ ನಾನು ಚಿರಋಣಿ.

'ಕಾವ್ಯಂ ಯಶಸೇ ಅರ್ಥಕೃತೇ'-ಕಾವ್ಯವು ಆಗೀಗ ಧನವನ್ನು ತರುತ್ತದೆ. ಇಂದಿನ ಲೌಕಿಕ ಪ್ರಪಂಚದಲ್ಲಿ ಧನಕ್ಕೆ ಎಷ್ಟೇ ಕೆಟ್ಟ ಹೆಸರಿದ್ದರೂ ಅದು ತೇಜಸ್ವಿ ಮುಖವನ್ನು ಪೂರ್ಣವಾಗಿ ಕಳೆದುಕೊಂಡಿಲ್ಲ. ಹಣವೇ ಹೆಚ್ಚು ತೂಕವುಳ್ಳದ್ದಿದೆಯೇ ಮತ್ತು ಕೀರ್ತಿ ಬರಿ ಧ್ವನಿ ಮಾತ್ರವೇ?

"Fame like a wayward girl shall still be coy
To those who woo her with too slavish knees
And makes surrender to a thoughtless boy
And dotes the more upon a heart at ease:"

- J. Keats

ಕೀಟ್ಸ ಕವಿ ಹೇಳಿದಂತೆ, ಕೀರ್ತಿಯು ತನ್ನನ್ನು ದೈನ್ಯನಿಂದ ಬೇಡುವವರ ಬಳಿಸಾರಲು ಒಬ್ಬ ತುಂಟ ಬಾಲೆಯಂತೆ ನಾಚುವುದಂತೆ. ತಿಳಿಗೇಡಿ ಸಾಹಸಿ ಹುಡುಗನಿಗೆ ಮಾತ್ರ ವಶವಾಗುವದಂತೆ! ಸಮಾಧಾನದ ಹೃದಯವಂತನನ್ನು ಅತಿ ಹೆಚ್ಚು ಪ್ರೀತಿಸುವುದಂತೆ! ಈ ಕೀರ್ತಿ ಒಂದಿಷ್ಟು ಪ್ರಕಾಶವೂ ಆಗಿದೆ. ಅದು ನನ್ನ ಬಳಿ ಬಂದಾಗ ನಾನೇನೂ ಸ್ವಾಸ್ಥ್ಯವನ್ನು ಕಳೆದುಕೊಳ್ಳುವುದಿಲ್ಲ. ಇರಲಿ ಕವಿಗಳು ತಮ್ಮ ಹಿಂದೆ ಈ ಪೃಥ್ವಿಯಲ್ಲಿ ಆತ್ಮವೊಂದನ್ನು ಬಿಟ್ಟು ಹೋಗುವರೆಂದು ಒಬ್ಬ ಕವಿ ಹೇಳಿದ್ದಾನೆ. ಈ ಕವಿಗಳಿಗೆ ಎರಡು ಆತ್ಮಗಳು ಇರುತ್ತವೆಯಂತೆ. ಪ್ರೇಮವನ್ನು ಹಂಚಿದಾಗ ಅದು ಚಿನ್ನದಂತೆ ಕಡಿಮೆಯಾಗುವುದಿಲ್ಲವೆಂದು ಹೇಳಲಾಗುತ್ತದೆ. ಚಿನ್ನದ ಬಗೆಗೂ ನಾನು ಒಂದು ಒಳ್ಳೇ ಮಾತನ್ನು ಹೇಳುತ್ತೇನೆ. ''ಚಿನ್ನವನ್ನು ಭಾಗಿಸಿದರೂ ಅದು ಚಿನ್ನವಾಗಿಯೇ ಉಳಿಯುತ್ತದೆ.''

ಈ ಅರ್ಥ-ಯಶಗಳ ಮಾತು ಏನೇ ಇರಲಿ ಮನುಕುಲದ ಚರಿತ್ರೆಯಲ್ಲಿ ವಾಙ್ಮಯದ ಸಿದ್ಧಿಯೇನು? ಅದು ಮಾನವನಲ್ಲಿ ಎಷ್ಟರ ಮಟ್ಟಿಗೆ ಮಾನವೀಯತೆಯನ್ನು ಉಂಟುಮಾಡಿದೆ? ಚರಿತ್ರೆಯ ವಿವಿಧ ಕಾಲಾವಧಿಗಳಲ್ಲಿ ಜರುಗಿದ ಸಾಮಾಜಿಕ-ರಾಜಕೀಯ ಘಟನೆಗಳನ್ನು ಅವಲೋಕಿಸಿದಾಗ ಈ ಮಾನವನೆಂಬುವನು ತನ್ನಲ್ಲಿಯ ಪಶುತ್ವವನ್ನೂ ಪಿಶಾಚಿತ್ವವನ್ನೂ ಮೇಲಿಂದ ಮೇಲೆ ಹೊರಗೆಡವಿದ್ದಾನೆಂದು ತಿಳಿದು ಬರುತ್ತದೆ. ವಾಙ್ಮಯದ ದಿವ್ಯದ ಮುಖವೆಂದು ಯಾವುದಕ್ಕೆ ನಾವು ಕರೆಯುತ್ತೇವೋ ಅದರಲ್ಲಿ ಕೂಡ ಕರಿ ಕಲೆಗಳು ಉಂಟು. Divine Comedy ಎಂಬ ಕೃತಿ ನಿಜವಾಗಿಯೂ Divine ಇದೆಯೇ? ಹಿರೋಶಿಮಾ ಮತ್ತು ನಾಗಾಸಾಕಿ ನಗರಗಳು ನಿಮಿಷಾರ್ಧದಲ್ಲಿ ಭಸ್ಮೀಭೂತವಾದವಲ್ಲಾ! ಅಲ್ಲಿ ಸತ್ತವರ ಬೂದಿ ಬರಿ ಬೂದಿಯಾಗಲಾರದೆ ಮಾನವನ ಜನಾಂಗದ ಅತ್ಯಾಶೆಯ ಅಶುದ್ಧ ರಕ್ತದಲ್ಲಿ ಜಾತಿ, ವರ್ಣ, ಮತ, ಏನೇನೋ ಇವೆ. ವಾಙ್ಮಯದಲ್ಲಿ ವರ್ಣಿತವಾಗಿರುವ 'ರಸ'ವು ಈ ರಕ್ತಕ್ಕಿಂತಲೂ ದಟ್ಟವಾಗಿದೆಯೆ? ಸುಖದುಃಖಗಳು ಸೌಂದರ್ಯ ಪ್ರಜ್ಞೆಯುಳ್ಳ ಭೋಗಕ್ಕಿಂತ ಹೆಚ್ಚು ಶುಚಿಕರವಾಗಿವೆಯೆ?

ಹಣವು ಚಲಾವಣೆಯನ್ನು ಕಳೆದುಕೊಂಡಾಗ ಅದು ಬರಿ ಕಾಗದವೋ ಬರಿ ಧಾತುವೋ ಮಾತ್ರ; ಅದಕ್ಕೆ ಹೆಚ್ಚಿನ ಬೆಲೆ ಇಲ್ಲ. ಒಂದು ಭಾಷೆ ವಾಙ್ಮಯರೂಪದಲ್ಲಿ ಚಲಾವಣೆ ಪಡೆದಾಗ ಅದು ನಮ್ಮಲ್ಲಿ ಸ್ಪರ್ಶೀಯ ಆಶೆಗಳನ್ನು ಹುಟ್ಟಿಸಿ ನಮ್ಮನ್ನು ಮೋಹಗೊಳಿಸುತ್ತದೆ. ಅದು ಧ್ವನಿ ಮಾತ್ರ ಮತ್ತೇನೂ ಅಲ್ಲ; ಬಹುಶಃ ಅದು ಅಭದ್ರ ಅನಾರೋಗ್ಯವು ಆದೀತು. ಅದು ಕೇವಲ ಪ್ರಕಾಶವಲ್ಲ; ದಟ್ಟ ಅಂಧಕಾರವೂ ಸರಿ. ಶಾಂತಿ ಎಷ್ಟೋ ಸಲ ಪರಿಣಾಮತಃ ಯುದ್ಧಕ್ಕೆ ಪ್ರಸ್ತಾವನೆಯಾಗಿಬಿಟ್ಟಿದೆ. ಈ ಶಾಂತಿಯ ಅವಧಿ ಮಾನುಷ ಅಥವಾ ಅಮಾನುಷ ಸಮಸ್ಯೆಗಳನ್ನು ತಪ್ಪಾಗಿ ತಿಳಿದುಕೊಳ್ಳಲು ಕೈಕೊಳ್ಳುವ ಸಿದ್ಧತೆಗೆ ಅವಶ್ಯವಿದ್ದ ಕಾಲಾವಧಿಯೆನಿಸುತ್ತದೆ. ಮನುಕುಲದ ಚರಿತ್ರೆಯೆಂಬುದು ಏನದು? ರಾಮಾಯಣ, ಮಹಾಭಾರತ, ಭಾಗವತ ಪುರಾಣವೂ ಸರಿ-ಎಲ್ಲವೂ ಮಹೋನ್ನತ ಅಥವಾ ಸಹನೀಯ ದುರಂತದಲ್ಲಿ ಕೊನೆಗೊಳ್ಳುತ್ತವೆ. ರಾವಣ, ದುರ್ಯೋಧನ, ಕರ್ಣ, ಕೀಚಕ ಇವರೆಲ್ಲಾ ತಾವು ಹೆಚ್ಚು ಪೌರುಷಶಾಲಿಗಳೆಂದೇ ಶ್ರೋತೃವೃಂದದ ಮೇಲೆ ಪ್ರಭಾವ ಬೀರುತ್ತಾರೆ. ಅವರು ಸೋತಾಗ, ಸತ್ತಾಗ ಅನೇಕರಿಗೆ ಸಾಕಷ್ಟು ಕನಿಕರವೆನಿಸುತ್ತದೆ. ಇನ್ನು ಕೆಲವರಿಗೆ-ಅವರ ಸಂಖ್ಯೆಯೇನೂ, ಕಡಿಮೆಯಿಲ್ಲ-ಈ ಖಳನಾಯಕರು ''ಮಹಾನುಭಾವ''ರಾಗಿಯೂ ಕಾಣುತ್ತಾರೆ. ಧರ್ಮಕ್ಕೆ, ನ್ಯಾಯಕ್ಕೆ ಉಚಿತವಾದ ಜಯವೆಂದು? ಎಂದು ಕಣಸಿಗನಾದ ಕವಿಯೊಬ್ಬ ಕೇಳುತ್ತಾನೆ. ಸದ್ಯಃಕಾಲದ ರಾಜಕಾರಣದಲ್ಲಿಯೇ ನಾವು ಹೆಚ್ಚು ಆಸಕ್ತರಾಗಿದ್ದೇವೆ. ಶಾಶ್ವತತೆಯ ಗತಿಯೇನು? ತೋರಿಕೆಗೆ ಅಸಾಧ್ಯವಾದುದಾಗಿದ್ದರೂ ಬಹುಶಃ ಯಾವುದು ಸಂಭವನೀಯವಿದೆಯೋ

ಅಂತಹುದು ಎಂದಾದರೂ ಈ ಪೃಥ್ವಿಯ ಮೇಲೆ ಜೀವನದ ಏಕಮಾತ್ರ ಸತ್ಯವಾಗಿ ಹೊರಹೊಮ್ಮಿ ಬರುವುದೇ? ಸಾವಿತ್ರಿಯು ಸತ್ಯವಾನನನ್ನು ಭವ್ಯ ಭೀಕರ ಮೃತ್ಯುವಿನ ದವಡೆಯೊಳಗಿಂದ ಉಳಿಸಿಕೊಳ್ಳುವಳೇ? ಅಗಲಿದ ಪ್ರಾಣವನ್ನು ಮರಳಿ ಪಡೆಯುವಳೇ? ಶ್ರೀ ಅರವಿಂದರ ''ಸಾವಿತ್ರಿ'' ಮಹಾಕಾವ್ಯದ ಪ್ರೇಮ ಸತ್ಯಗಳ ಶ್ರುತಿಕಾವ್ಯವಾಗಿದೆ.

ನಾನು ಕರ್ನಾಟಕದಲ್ಲಿ 'ಧಾರವಾಡ ಸೀಮೆ'ಯೆಂಬ ಪ್ರದೇಶದವನೆಂದು ಈ ಮೊದಲು ಹೇಳಿದ್ದೇನೆ. ಈ ಪ್ರದೇಶದಲ್ಲಿ ಇಬ್ಬರು ಕವಿಗಳು ಆಗಿ ಹೋಗಿದ್ದು ಅವರು ತಮ್ಮ ತಮ್ಮ ಸಮಕಾಲೀನ ಕವಿಗಳಲ್ಲಿ ಯುಗ ಪುರುಷರೆನಿಸಿದ್ದಾರೆ. ಸೀಮಾಪುರುಷರೆನಿಸಿದ್ದಾರೆ. ಪಂಪ-ಕುಮಾರವ್ಯಾಸರೇ ಅವರು. ಪಂಪ ಕವಿಯೋ ಜನ್ಮದಿಂದ ವಿಪ್ರನಾದರೂ ಸ್ವಾನುಭವ-ಶ್ರದ್ಧೆಗಳಿಂದ ಜೈನನು. ಕುಮಾರವ್ಯಾಸನು ಮಾತ್ರ ಕರ್ಮಕ್ಷೇತ್ರದ ಮಹಾಕಾವ್ಯವನ್ನು ಭಗವಂತನಿಗೆ ಅರ್ಪಿಸಿಕೊಂಡ ಭಕ್ತಿಕಾವ್ಯವನ್ನಾಗಿ ರೂಪಿಸಿದ್ದಾನೆ. ಇಬ್ಬರೂ ಮಹಾಭಾರತದ ಕಥಾಂಶಗಳನ್ನೇ ವಿವೇಚಿಸುತ್ತಾರೆ. ಒಬ್ಬನು ಅನೇಕ ವೀರ ಪಾತ್ರಗಳನ್ನು ವಿವಿಧ ವರ್ಣಗಳಲ್ಲಿ ವಿವಿಧ ಮಾನದಂಡಗಳೊಂದಿಗೆ ಚಿತ್ರಿಸುತ್ತಾನೆ. ಇನ್ನೊಬ್ಬನು ದೈವ-ಶ್ರದ್ಧೆ-ಸ್ವಾತಂತ್ರ್ಯಗಳ ತಿರುಗಣಿ ಮಡುವಿನೊಳಗಿಂದ ವರ್ಣಮಯ ಪ್ರಕಾಶ ರೂಪದಲ್ಲಿ ಮೇಲೆದ್ದು ಬರುತ್ತಾನೆ. ಪಂಪನು ಜೈನ ಪರಂಪರೆಯ ಆದಿ ಪುರಾಣವನ್ನು ಮಹಾಕಾವ್ಯ ರೂಪದಲ್ಲಿ ಬರೆದಿದ್ದಾನೆ. ಅದರ ಕೊನೆಯಾದರೂ ವ್ಯಾಸರ ಮಹಾಭಾರತದಲ್ಲಿ ಇದ್ದಂತೆ ಕಲಿಪುರುಷನ ಆಗಮನವನ್ನೇ ಸಾರುತ್ತದೆ. ಅದೇ ನಾಡಿನಿಂದ ಬಂದ ನಾನು ಒಂದಿಷ್ಟು ಹೆಚ್ಚು ಶುಭಕರವಾದುದನ್ನು ಉಸಿರಬಯಸುತ್ತೇನೆ. ನವ ಕೃತಯುಗವೊಂದು ಕ್ಷಿತಿಜದಲ್ಲಿ ಮೂಡತ್ತಲಿದೆಯೆಂದು ನನಗೆ ಅನಿಸುತ್ತಾ ಇದೆ.

ವಿಶ್ವ ಜಗತ್ತು ಪೃಥ್ವಿ ಒಂದೇ ಇದೆ. ಪ್ರಾಣ, ಮಾನವ, ಮನುಕುಲ ಒಂದೇ. ಇದುವೇ ಸತ್ಯ, ಸದ್ವಸ್ತು; ಇದನ್ನು ನಾವು ಮೊದಲು ಶೋಧಿಸಿ ಬಳಿಕ ಅನುಭವದಿಂದ ಅರಿಯಬೇಕು. ಯಾವುದು ನಿಜವೋ ಅದರದೇ ಸಾಕ್ಷಾತ್ಕಾರವಾಗುವುದು. ಯಾವುದು ನಿಜವಲ್ಲವೋ ಅದು ಆಶಾಭಂಗವನ್ನುಂಟು ಮಾಡುವದು. ಈ ಸತ್ಯವನ್ನು ನಾವು ಪ್ರೀತಿಸುತ್ತಾ ಅದನ್ನು ನಮ್ಮ ಜೀವನದಲ್ಲಿ ಇದ್ದು ತೋರಿಸದ ಹೊರತು ನಮಗಾಗಲಿ ಅನ್ಯರಿಗಾಗಲಿ ಯಾವುದೇ ಶುಭವನ್ನು ಸಾಧಿಸುವ ಬಲವನ್ನು ನಾವು ಪಡೆಯಲಾರೆವು. ಜೀವನದ ಈ ರೀತಿಯೇ ಸೌಂದರ್ಯದ ದರ್ಶನವನ್ನು ಒದಗಿಸುತ್ತದೆ ಮತ್ತು ಆನಂದದ ಜೀವನಕ್ಕೆ ದಾರಿ ಮಾಡಿಕೊಡುತ್ತದೆ. 'ಒಳ್ಳೇ ಉದ್ದೇಶಗಳೊಡನೆಯೇ ನರಕದ ದಾರಿ ತೆರೆಯುತ್ತದೆ.' ಸೃಷ್ಟಿ ಸ್ವಚ್ಛಂದವಾಗಿದೆ, ಸುವ್ಯವಸ್ಥಿತವಾಗಿದೆ, ಕ್ರಮಬದ್ಧವಾಗಿದೆ, ಸಮಂಜಸವಾಗಿದೆ. ಬಂಧನವೂ ಅಸ್ತವ್ಯಸ್ತತೆಯೂ ವಿಕೃತಿಗಳೇ ಆಗಿವೆ. ಸಮತೂಕವಿಲ್ಲದ ಬಾಳುವೆ ವಿರಸವೇ ಸರಿ. ಈ ಬಗೆಯ ವಿರಸ ಮನೋವೃತ್ತಿ ಪ್ರಳಯಕ್ಕೆ ಪ್ರಸ್ತಾವನೆಯಾಗಿದೆ.

ಪೃಥ್ವಿಯ ಮೇಲೆ ಮಾನವನಲ್ಲಿ ಯಾವುದೋ ಒಂದು ಶಕ್ತಿ ಇದ್ದು ಅದುವೇ ನೂತನವಾದ ಜೀವನ-ದರ್ಶನಕ್ಕೆ ಕರೆಕೊಡುತ್ತಿದೆಯೆಂದು ಕಂಡುಬರುತ್ತದೆ. ಪ್ರತಿಯೊಬ್ಬನು ತಾನೇ ನಿರ್ಮಿಸಿಕೊಂಡ ಆವರಣವನ್ನು ಹರಿದೊಗೆಯಬೇಕಾಗುತ್ತದೆ. ಆಯಾ ವ್ಯಕ್ತಿಯ ಆತ್ಮ-ದೇಹ-ಅಹಂಕಾರಗಳ ನಡುವೆ ತೋರಿಕೆಗಳ ಒಂದು ಮುಸುಕು ಉಂಟು. ನಾವು ಸಂಕಲ್ಪಿಸಿದ್ದಾದರೆ ಆ ಮುಸುಕನ್ನು ನಾವು ಹರಿದೊಗೆಯಬಲ್ಲೆವು. ಸಂಕಲ್ಪದ ಕೊರತೆ ಮಾತ್ರ ಇದೆ.

